

ಕಾಯಕವೇ ಕೈಲಾಸ

# ಸಿದ್ಧಗಂಗಾ

## ಸುವರ್ಣ ಮಹೋತ್ಸವ ವರ್ಷ



ಸಂಪುಟ : ೫೦ ಸೆಪ್ಟೆಂಬರ್–ಅಕ್ಟೋಬರ್ ೨೦೧೪ ಸಂಚಿಕೆ : ೯–೧೦



ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು ಶ್ರೀಮಠಕ್ಕೆ ಭೇಟಿ ನೀಡಿದ ಸಂದರ್ಭ. ಪ್ರಧಾನಮಂತ್ರಿಗಳೊಂದಿಗೆ ಪರಮಪೂಜ್ಯರಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಕರ್ನಾಟಕ ರಾಜ್ಯಪಾಲರಾದ ಶ್ರೀ ವಜುಭಾಯಿ ವಾಲಾ, ಕೇಂದ್ರ ಸಚಿವರಾದ ಶ್ರೀ ಡಿ.ವಿ. ಸದಾನಂದಗೌಡ, ಶ್ರೀ ಜಿ.ಎಂ. ಸಿದ್ಧೇಶ್ವರ, ಸಂಸದರಾದ ಶ್ರೀ ಬಿ.ಎಸ್. ಯಡಿಯೂರಪ್ಪ, ಶ್ರೀ ಪ್ರಹ್ಲಾದ್ ಜೋಶಿ ಅವರು.



ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ. ಈ ಸಂದರ್ಭದಲ್ಲಿ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಕಾಶ್ಮೀರದಲ್ಲಿ ಪ್ರವಾಹದಿಂದ ನೊಂದ ಸಂತ್ರಸ್ತರ ನೆರವಿಗಾಗಿ ಪರಮಪೂಜ್ಯ ಶ್ರೀ ಶ್ರೀಗಳವರು ಪ್ರಧಾನಮಂತ್ರಿಗಳ ಪರಿಹಾರ ನಿಧಿಗೆ 25 ಲಕ್ಷ ರೂ.ಗಳ ಚೆಕ್‌ನ್ನು ಪ್ರಧಾನಮಂತ್ರಿಗೆ ನೀಡುತ್ತಿರುವುದು.




ಸಂಪಾದಕ :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕ :
**ಎಚ್.ಎಸ್. ಸಿದ್ಧಗಂಗಪ್ಪ**

ಸಂಚಾಲಕ :
**ಎಂ. ರೇಣುಕಾರಾಧ್ಯ**

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**

ವಿತರಣೆ :
**ಆರ್.ಎಸ್. ಮಲ್ಲೇಶಪ್ಪ**

ಛಾಯ ಚಿತ್ರಗಳು :
**ಬಿ.ಸಿ. ಸುರೇಶ್**

**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು – ೫೭೨ ೧೦೪.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –೫೭೨ ೧೦೪

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೦ ಸೆಪ್ಟೆಂಬರ್-ಅಕ್ಟೋಬರ್ ೨೦೧೪ ಸಂಚಿಕೆ : ೯-೧೦

## ಒಳಪುಟಗಳಲ್ಲಿ ..................



ಚಂದಾ ವಿವರ : ವಾರ್ಷಿಕ ಚಂದಾ ರೂ. ೨೦೦/-
ಆಜೀವ ಸದಸ್ಯತ್ವ ರೂ. ೧೫೦೦/- ಬಿಡಿ ಪ್ರತಿ ರೂ. ೧೨.೦೦

## ಆಚಾರ್ಯ ದೇವ್ರೋಭವ

ಸೆಪ್ಟೆಂಬರ್ ಇದು ಶಿಕ್ಷಕರು ಹೆಮ್ಮೆ ಪಡುವ ದಿನ. ಈ ಗೌರವವನ್ನು ತಂದುಕೊಟ್ಟವರು ರಾಷ್ಟ್ರಪತಿಗಳಾಗಿದ್ದ ಶ್ರೀ ಸರ್ವಪಲ್ಲಿ ಡಾ. ರಾಧಾಕೃಷ್ಣನ್‌ರವರು. ಅವರನ್ನೆಂದೂ ಶಿಕ್ಷಕರು ಮರೆಯುವಂತಿಲ್ಲ. ಮರೆಯಬಾರದು. ಈ ದಿನದಂದು ಶಿಕ್ಷಕರು ಆತ್ಮವಿಮರ್ಶೆ ಮಾಡಿಕೊಳ್ಳುವುದಾಗಬೇಕು. ತಮ್ಮ ಕರ್ತವ್ಯದಲ್ಲಿ ತಾವೆಷ್ಟು ಎಚ್ಚರವಾಗಿದ್ದೇವೆಂಬುದನ್ನು ಪರಿಶೀಲಿಸುವುದಾಗಬೇಕು. ತಮ್ಮ ತರಗತಿಗಳಿಗೆ ತೆರಳುವ ಮುನ್ನ ಪೂರ್ವಸಿದ್ಧತೆಯಿಲ್ಲದೆ ಹೋಗುತ್ತಿದ್ದೇವೆಯೇ ಎಂದು ಪ್ರಶ್ನಿಸಿಕೊಳ್ಳುವುದಾಗಬೇಕು. **'ಆಚಾರ್ಯ ದೇವ್ರೋಭವ'.** ಶಿಕ್ಷಕ ದೇವರಿಗೆ ಸಮಾನ ಎನ್ನುವ ಪ್ರಾಜ್ಞ ವಾಣಿಯನ್ನು ಅರಿತು ತಮ್ಮ ನಡೆ ನುಡಿಯನ್ನು ಪ್ರತಿನಿತ್ಯ ತಿದ್ದಿಕೊಳ್ಳುವುದಾಗಬೇಕು. ನುಡಿ ಕಲಿಸುವ, ನಡೆ ಕಲಿಸುವ, ಉಣ ಕಲಿಸುವ, ಉಡಲು ಕಲಿಸುವ ಶಿಕ್ಷಕ **'ಆವಾಗಲೂ ಜಾಗರವಿದ್ದು ಸಸಿಯ ಸಲಹುವ'**ವನಾಗಬೇಕು.

ಇತ್ತೀಚಿನ ದಿನಗಳಲ್ಲಿ ಶಿಕ್ಷಕ ಶಾಲೆಗೆ ಬರುವ ವಿದ್ಯಾರ್ಥಿನಿಯರನ್ನು ತನ್ನ ಕಾಮತೃಷೆಗೆ ಬಳಸಿಕೊಳ್ಳುವ ಸುದ್ದಿಗಳು ದಿನನಿತ್ಯ ಪತ್ರಿಕೆಗಳ ಪುಟಗಳಲ್ಲಿ ಕಾಣಿಸಿಕೊಳ್ಳುವುದನ್ನು ಕಂಡಾಗ **'ಧರೆ ಹೊತ್ತಿ ಉರಿದರೆ ನಿಲಬಾರದು'** ಎಂಬ ಬಸವಣ್ಣನವರ ವಚನ ಎಷ್ಟು ಸತ್ಯ ಎನಿಸುತ್ತದೆ. ವಿದ್ಯಾರ್ಥಿನಿಯರನ್ನು ಸೋದರಿಯರೆಂದು, ತಂಗಿಯರೆಂದು ಕಾಣುವ ಸಾವಿರಾರು ಶಿಕ್ಷಕರು ಇಂದೂ ಇದ್ದಾರೆ. ಅವರ ನಡುವೆ 'ಅತ್ಯಾಚಾರಿ'ಗಳಾಗಿರುವ 'ಕೆಲವರು' ಇದ್ದು ಇಡೀ ಶಿಕ್ಷಕ ಸಮುದಾಯ ತಲೆ ತಗ್ಗಿಸುವಂತೆ ನಡೆದುಕೊಳ್ಳುತ್ತಿರುವುದು ಅಂಥವರು ನಿಂದ ನೆಲದ ಗುಣವೋ ಅಥವಾ ಅಂಥವರು ಬಂದ ಕಾಲಗುಣವೋ- ಏನನ್ನಬೇಕೋ ತಿಳಿಯದಾಗಿದೆ. ವಿದ್ಯಾರ್ಥಿಗಳು ಶಿಕ್ಷಕರ ನಡೆನುಡಿಗಳನ್ನು ಗಮನಿಸುತ್ತಲೇ ಇರುತ್ತಾರೆ. ಅವರೇ ನಿಜವಾದ ವಿಮರ್ಶಕರು. **'ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ವಿದ್ಯೆಯಂ ಕಲಿಸಿದರೆ ಆಗಲಿ ಮಹಾಪ್ರಸಾದವೆಂದೆನಯ್ಯಾ ಗುಹೇಶ್ವರಾ'** ಎಂಬ ಅಲ್ಲಮಪ್ರಭುದೇವರ ವಚನದ ಅಂತರಾರ್ಥವನ್ನು ಅರಿತು ಶಿಕ್ಷಕ ತನ್ನನ್ನು ತಾನು ದಿನದಿನವೂ ಹೆಜ್ಜೆಹಾಕುವುದನ್ನು ಕಲಿಯಬೇಕು.

ಗಾಂಧಿ ಜಯಂತಿ ಅಕ್ಟೋಬರ್ ೨ರಂದು. ಯುಗದಸಿರಿ ಜಗದಸಿರಿಯಾಗಿ ಅರಳಿದ ಅಪ್ಪಟ ಭಾರತೀಯ ಜ್ಯೋತಿಪುರುಷನ ಪುಣ್ಯಸ್ಮರಣೆ. ಭಾರತೀಯರು ಪ್ರತಿನಿತ್ಯ ಆ ಮಹಾ ಪುರುಷನ ನೆನೆನೆನೆದೇ ದೀಪ ಬೆಳಗಿಸಬೇಕು. ವಿಶ್ವಕ್ಕೆ ವಿನೂತನ ಸಂದೇಶ





ನೀಡಿದ ಗಾಂಧೀಜಿ ತೋರಿಸಿಕೊಟ್ಟ ಮಹಾ ಆಯುಧ 'ಸತ್ಯಾಗ್ರಹ'. ಅಹಿಂಸೆಯ ವ್ರತವನ್ನು ಆಚರಿಸಿ ತೋರಿಸಿದ ಸತ್ಯಪುರುಷ. 'ಗಾಂಧಿಯೆಂಬಾ ಹೆಸರೇ ನಾಂದಿಯಾಗಲಿ ನಮ್ಮ ಸ್ವಾತಂತ್ರ್ಯ ಸಂಭ್ರಮಕೆ'- ಎಂದಿತು ಕವಿವಾಣಿ. ಅದರೊಂದಿಗೆ ಎಚ್ಚರಿಸಿತು **'ಅನಾವರಣವಾಯಿತಂತೆ ಗಾಂಧೀಜಿಯ ಚಿತ್ರಕೆ । ಸತ್ತಗಾಂಧಿ ಅತ್ತನೇನೋ ನಡೆದ ಈ ವಿಚಿತ್ರಕೆ । ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ । ಅನಾವರಣವಾದ ಮೇಲೆ ಸಿದ್ಧನಾಗು ಶಿಕ್ಷೆಗೆ ।'** - ಕವಿಯ ಕಣ್ಣು ಕಂಡ ಸತ್ಯದರ್ಶನ ವಾಗುವತನಕ ನಮಗೆ ಬುದ್ಧಿ ಬರದು.

ವಿಜಯದಶಮಿ, ದೀಪಾವಳಿ, ಯುಗಾದಿ ಹಬ್ಬಗಳನ್ನು ಆಚರಿಸುತ್ತಲೇ ಇದ್ದೇವೆ. ಬದಲಾವಣೆ ಏನಾಗಿದೆ. ಹಬ್ಬಗಳ ಉದ್ದೇಶ ಮಾನವೀಯತೆಯ ಉತ್ಕರ್ಷ. ಅಂತರಂಗದ ತುಂಬಾ ಕತ್ತಲೆ. ದೀಪ ಹೊಚ್ಚುವ ನಾಟಕ. ನಮ್ಮೊಳಗಿರುವ ಅವಗುಣಗಳನ್ನು. ಗೆಲ್ಲುವುದೇ ವಿಜಯದಶಮಿಯ ಒಳ ಅರ್ಥ. ಕಡಿಯಬೇಕಾದುದು ಬನ್ನಿಮರವನ್ನಲ್ಲ. ನಮ್ಮೊಳಗಿರುವ ಅವಗುಣಗಳ ತರುವನ್ನು. ಮುಡಿಯಬೇಕಾದುದು ಶುದ್ಧಗುಣಸಂಕೇತ ಶಮಿಯನ್ನು.

ರಾಷ್ಟ್ರದ ಪ್ರಧಾನಿ ಶ್ರೀ ನರೇಂದ್ರಮೋದಿಯವರು ಬಂದು ಹೋದರು. ಪರಮಪೂಜ್ಯರ ಶಿವಚರಣಗಳನ್ನು ಮುಟ್ಟಿ ನಮಸ್ಕರಿಸಿದರು. ಸಾಧು ಸಂತರೇ ರಾಷ್ಟ್ರದ ಆಸ್ತಿ ಎಂದರು. ಇಸ್ರೋ ವಿಜ್ಞಾನಿಗಳನ್ನು ಅಭಿನಂದಿಸಿದರು. ಸಂಸ್ಕೃತ ಭಾಷೆಯನ್ನು ಪ್ರಶಂಸಿಸಿದರು. ಪರಮಪೂಜ್ಯ ಶ್ರೀ ಶ್ರೀಗಳವರು ಕಾಶ್ಮೀರದ ಸಂತ್ರಸ್ತರಿಗೆ ನೀಡಿದ ಇಪ್ಪತ್ತೈದು ಲಕ್ಷ ರೂ.ಗಳ ಸಹಾಯವನ್ನು ಕೊಂಡಾಡಿದರು. ತಮ್ಮ 'ದೊಡ್ಡತನ'ವನ್ನು ಮೆರೆದರು, ಮಹಾತ್ಮಾಗಾಂಧಿಯವರು ಆಚರಿಸಲಾಶಿಸಿದ ಸ್ವಚ್ಛತೆಯನ್ನು ಕುರಿತು ಪ್ರಸ್ತಾಪಿಸಿದರು. ಶ್ಲಾಘನೀಯ. ಕೇವಲ ಬಹಿರಂಗದ ಸ್ವಚ್ಛತೆಯನ್ನು ಮಾತ್ರವಲ್ಲ ಪ್ರತಿಯೊಬ್ಬ ಭಾರತೀಯರೂ ಅಂತರಂಗದ ಸ್ವಚ್ಛತೆಯನ್ನು ಕಾಪಾಡಿಕೊಳ್ಳಬೇಕಾಗಿದೆ. 'ಅಂತರಂಗಶುದ್ಧಿ ಬಹಿರಂಗಶುದ್ಧಿ'ಯನ್ನು ಕುರಿತು ೧೨ನೇ ಶತಮಾನದ ಬಸವಣ್ಣನವರು ಒತ್ತಿ ಒತ್ತಿ ಹೇಳಿದುದನ್ನು ಮರೆತಿದ್ದೇವೆ. ಮರೆಯಬಾರದಲ್ಲವೆ?

ಇತ್ತೀಚೆಗೆ ನಿಧನರಾದ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ. ಯು.ಆರ್. ಅನಂತಮೂರ್ತಿಯವರ ಆತ್ಮಕ್ಕೆ ದಯಾಮಯನಾದ ಭಗವಂತನು ಚಿರಶಾಂತಿಯನ್ನು ಕರುಣಿಸಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

ಅನಿವಾರ್ಯ ಕಾರಣಗಳಿಂದ ಸೆಪ್ಟೆಂಬರ್ ಮತ್ತು ಅಕ್ಟೋಬರ್ ಸಂಯುಕ್ತ ಸಂಚಿಕೆಯನ್ನು ನಿಮ್ಮ ಕೈಗಿಡುತ್ತಿದ್ದೇವೆ. ವಿಳಂಬಕ್ಕೆ ಕ್ಷಮೆ ಕೋರುತ್ತೇವೆ. ನಿಮ್ಮ ಸಹಕಾರ ಯಾವತ್ತೂ ನಮಗಿದೆ ಎಂದು ಭಾವಿಸಿದ್ದೇವೆ.

**- ಸಂಪಾದಕ**

## ಶ್ರೀ ಸಿದ್ಧಲಿಂಗೇಶ್ವರ ವಚನ



*ಸುಧೆಯೊಳಗೆ ವಿಷವುಂಟೆ ? ಮಧುವಿನೊಳಗೆ ಕಹಿಯುಂಟೆ?*
*ದಿನಮಣಿಯೊಳಗೆ ಕಪ್ಪುಂಟೆ? ಬೆಳದಿಂಗಳೊಳಗೆ ಕಿಚ್ಚುಂಟೆ?*
*ಅಮೃತ ಸಾಗರದೊಳಗೆ ಬೇವಿನ ಬಿಂದುವುಂಟೆ ?*
*ಮಹಾಜ್ಞಾನ ಸ್ವರೂಪರಪ್ಪ ಶರಣರೆ ಲಿಂಗವೆಂದರಿದ ಮಹಾತ್ಮರಿಗೆ*
*ಸಂಕಲ್ಪ ಭ್ರಮೆಯುಂಟೆ? ಅದ್ವಾತರ ವಿಶ್ವಾಸ ಸುಡುಸುಡು ಮಹಾಲಿಂಗಗುರು*
*ಶಿವಸಿದ್ಧೇಶ್ವರ ಪ್ರಭುವೇ*

ಅಮೃತದಲ್ಲಿ ವಿಷ, ಮಧುವಿನಲ್ಲಿ ಕಹಿ, ಸೂರ್ಯನಲ್ಲಿ ಕಪ್ಪು, ಬೆಳದಿಂಗಳಲ್ಲಿ ಬೆಂಕಿ, ಕ್ಷೀರಸಮುದ್ರದಲ್ಲಿ ಬೇವಿನ ಬಿಂದು, ಇರುವುದಕ್ಕೆ ಸಾಧ್ಯವೇ? ಅಂತೆಯೇ ಸಮ್ಯಕ್ ಜ್ಞಾನಸ್ವರೂಪರಾದ ಶಿವಶರಣರೆ ಲಿಂಗವೆಂದು ನಂಬಿದ ಮಹಿಮಾಪರರಾದ ಶರಣರಿಗೆ, ನಾವು ವಸ್ತುರೂಪ ರಹುದೋ ಅಲ್ಲವೋ ಎಂಬ ಮನೋಸಂಕಲ್ಪದ ಭ್ರಾಂತಿ ಯುಂಟೆ? ಅದ್ವೈತದ ವಿಶ್ವಾಸ ಸುಡುಸುಡು – ಮಹಾ ಲಿಂಗಗುರು ಶಿವಸಿದ್ಧೇಶ್ವರ ಪ್ರಭು ಎನ್ನುತ್ತಾರೆ ತೋಂಟದ ಶ್ರೀ ಸಿದ್ಧಲಿಂಗೇಶ್ವರರು.

(ಕೃಪೆ : ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

**ಶ್ರೀವಾಣಿ**

ಒಂದೊಂದು ಹಾದಿಯ ಹಿಂದೆಯೂ ಅನುಭವದ ಸಾರ ಅಡಗಿರುತ್ತದೆ. ಬುದ್ಧಿಗೆ ಕೇಡುಂಟೆ? ವಿದ್ಯೆ ಬಲ್ಲವನಿಗೆ ಕೊನೆಯುಂಟೆ? ಮದ್ದುಂಟೆ ಜನನ ಮರಣಕ್ಕೆ? ವಿದ್ಯೆಗೆ ಕೊನೆ ಯಾವುದು? ಭೂಮಿ ಆಕಾಶಗಳಗಲ ಅದರ ವಿಸ್ತಾರತಾನೆ?

## ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ಬಾಳು ಬೇಸರವಾಗಿ ತವಚರಣವರಿಯದೆ
ದಿನಮಾನ ಕಳೆದುವು ಜೊಳ್ಳಾಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸತ್ವವ ಬಿತ್ತಿದೆ ಮರ್ತ್ಯವನೆತ್ತಿದೆ
ನಿತ್ಯ ಕಲ್ಯಾಣವ ಕಟ್ಟಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಡೋ ಮಕ್ಕಳೊಳಗೆ ಆನಂದವ ಕಾಣುವ
ಅರಳೋ ಹೂವಿನೊಳಗೆ ಪರಿಮಳವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹತ್ತು ಸಾವಿರದ ಹಲವಾರು ಚಿಣ್ಣರ
ಚಿಣ್ಣರಾಟದಲಿ ಚಿನ್ಮಯನಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಿಪರೀತ ಚರಿತನೆ ವಿಮಲಮಾನಸ ವಿಭುವೆ
ವಿಶ್ವವಿಭೂತಿ ಎನಿಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸದಮಲಜ್ಞಾನನೆ ಸಂಪನ್ನ ಜಯದೇವ
ಭ್ರಮೆಯ ಕತ್ತಲೆ ಕಳೆವ ಸಿರಿದೀಪ ॥ ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ನೀನಲ್ಲದೆ ನಾನೆಂಬುದಿಲ್ಲ'ವೆಂಬುದನರಿದೆ
'ನಾನು' ಕಳೆದಿಲ್ಲದೆ ನೀಕಾಣೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನದ ವಿಕಾರದ ಕತ್ತಲೆಯ ಕಳೆಯೆಂಬೆ
ತನು ವಿಕಾರದ ಹುಸಿಯ ಬಿಡಿಸೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತಿನ ಬಳಕೆಯ ಮಾಲೆಗಾರನಲ್ಲ
ತೂತುಜ್ಞಾನದಯತಿಯಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ರಚನೆ ರಂಜಕನುಡಿವ ಜಂಗಮ ನೀನಲ್ಲ
ನರರ ಹಾಡಿ ಹೊಗಳಿ ಬೇಡುವನಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಶಿಸ್ತು





ಪ್ರಾರ್ಥನಾ ಸಭೆಯಲ್ಲಿ ಶಿಸ್ತಿನಿಂದ ಕುಳಿತುಕೊಳ್ಳುವುದನ್ನು ಮೊದಲು ಅಭ್ಯಾಸ ಮಾಡಿಕೊಳ್ಳಿ. ನೀವಿನ್ನೂ ಚಿಕ್ಕವರು. ಮನಸ್ಸು ಅತ್ತ ಇತ್ತ ಸುಳಿದಾಡುತ್ತಲೇ ಇರುತ್ತದೆ. ಅದನ್ನು ಪ್ರಾರ್ಥನಾ ಗೀತೆಗಳತ್ತ ತಿರುಗಿಸುವುದನ್ನು ಕಲಿಯಿರಿ. ಪ್ರಾರ್ಥನೆಯಲ್ಲಿರುವಾಗ ಮಾತನಾಡಬಾರದು. ಸುತ್ತಮುತ್ತ ನೋಡಬಾರದು. ನಿಮ್ಮ ಮನಸ್ಸೆಲ್ಲ ಪ್ರಾರ್ಥನೆಯಲ್ಲಿ ಹೇಳಿಕೊಡುವ ಶ್ಲೋಕಗಳು, ಗೀತೆಗಳು ಹಾಗೂ ಹಾಡುಗಳು, ವಚನಗಳು, ಕೀರ್ತನೆಗಳು, ಇವುಗಳತ್ತಲೇ ಇರಬೇಕು. ಶ್ರದ್ಧೆ, ನಿಷ್ಠೆ ಇರಬೇಕು. ಜ್ಞಾನಸಂಪಾದನೆಗೆ ಪ್ರಾರ್ಥನೆ ಮೊದಲ ಮೆಟ್ಟಿಲು. ಹೇಳಿಕೊಡುವ ಪ್ರಾರ್ಥನಾ ಪದ್ಯಗಳನ್ನು ಕಂಠಪಾಠ ಮಾಡಿಕೊಳ್ಳಿ, ಬೆಳಿಗ್ಗೆ ಎದ್ದ ತಕ್ಷಣ ನೆನಪಿಸಿಕೊಳ್ಳಿ. ಇಲ್ಲಿ ಹೇಳಿಕೊಟ್ಟ ವಚನಗಳನ್ನು ಗೀತೆಗಳನ್ನು. ನಿಮಗೆ ಒಂದು ಮಾತು ಹೇಳಬೇಕು. ರಾಷ್ಟ್ರಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಪುಣ್ಯಾತ್ಮ ಮಹಾತ್ಮ ಗಾಂಧೀಜಿಯವರು ಪ್ರಾರ್ಥನೆಗೆ ಬಹು ಮಹತ್ವವನ್ನು ಕೊಟ್ಟಿದ್ದರು. ಈ ಪ್ರಾರ್ಥನಾ ಸಭೆಯನ್ನು ನೋಡುವುದಕ್ಕಾಗಿಯೇ ಬಹುದೂರದೂರಿನಿಂದ ನಿಮ್ಮ ತಂದೆ ತಾಯಿಗಳು, ಪಾಲಕರು, ಪೋಷಕರು ಜೊತೆಗೆ ಸಾರ್ವಜನಿಕರು ಬರುತ್ತಾರೆ. ಈ ಸಭೆಯನ್ನು ಕಂಡು ಹರ್ಷಿತರಾಗುತ್ತಾರೆ. ತಮಗೆ ದೊರೆಯದ ಭಾಗ್ಯ ನಮ್ಮ ಮಕ್ಕಳಿಗಾದರೂ ಸಿಕ್ಕಿದೆಯಲ್ಲ ಎಂದು ಆನಂದಿಸುತ್ತಾರೆ. ನೀವು ಇದನ್ನು ಅರ್ಥಮಾಡಿಕೊಳ್ಳಬೇಕು. ಅವರವರ ದೇವರ ಕಲ್ಪನೆಯ ಮಟ್ಟ ಎಷ್ಟೆಷ್ಟು ಇದೆಯೋ ಅವರವರ ಪ್ರಾರ್ಥನೆಯ ಮಟ್ಟವೂ ಅಷ್ಟೆ. ಪ್ರಾರ್ಥನೆ, ಶ್ರದ್ಧಾಪೂರ್ಣವಾದ ಆರಾಧನೆಯಾಗಿ, ಸಾಧನೆಯಾಗಿ, ಆರಂಭವಾಗಲು ಜೀವಕ್ಕೆ ಒಂದು ಬಗೆಯ ಸಂಸ್ಕಾರ ಬೇಕು. ಅದನ್ನಿಲ್ಲಿ ನೀವು ದಿನದಿನವೂ ರೂಢಿಸಿಕೊಳ್ಳುವುದಾಗಬೇಕು. ಈ ಸಂಸ್ಕಾರ ನಿಮ್ಮ ಇಡೀ ಜೀವನದುದ್ದಕ್ಕೂ ಕೈಹಿಡಿದು ನಡೆಸುವುದಾಗಬೇಕು.

❀

# ಶ್ರೀಮಠಕ್ಕೆ ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರ ಭೇಟಿ

ಸಂಸಾರಿಯಾದವರು ಅದನ್ನು ಸರಿಸಿ ಸಮಾಜದ, ನಾಡಿನ, ದೇಶದ, ಮಾನವತೆಯ ಉನ್ನತಿಗಾಗಿ ಯಾರು ಶ್ರಮಿಸುವರೋ ಅವರು ಸಂತರು. ಈ ವರ್ಗಕ್ಕೆ ಸೇರಿದವರು, ಭಾರತದ ಪ್ರಧಾನಿಯಾದುದೆ ವಿಶೇಷ. ಅವರೆ ನರೇಂದ್ರ ದಾಮೋದರ ಮೋದಿಯವರು. ಇಂತಹವರನ್ನು ಪ್ರಧಾನಿಯನ್ನಾಗಿ ಮಾಡಿದ ಹೆಗ್ಗಳಿಕೆ ಭಾರತದ ಪ್ರಜಾಪ್ರಭುತ್ವಕ್ಕೆ ಸಲ್ಲುತ್ತದೆ.

ಸನ್ಮಾನ್ಯ ಪ್ರಧಾನಿಯವರು ಪೂರ್ವನಿಯೋಜಿತ ಕಾರ್ಯಕ್ರಮವಿಲ್ಲದೆ ಸಹಜವಾಗಿ ಶ್ರೀ ಸಿದ್ಧಗಂಗಾಮಠಕ್ಕೆ ಬಂದಿದ್ದು ಮಹತ್ವದ ಸಂಗತಿಯಾಗಿದೆ. ೨೪-೦೯-೨೦೧೪ರಂದು ಯಶಸ್ವಿ ಮಂಗಳಯಾನ ವೀಕ್ಷಿಸಿ, ನೇರವಾಗಿ ಸಿದ್ಧಗಂಗಾಮಠಕ್ಕೆ ಬಂದರು. ಪ್ರಧಾನಮಂತ್ರಿಯವರನ್ನು ಮತ್ತು ರಾಜ್ಯದ ರಾಜ್ಯಪಾಲರಾದ ವಜೂಭಾಯಿವಾಲಾ ಅವರನ್ನು ಶ್ರೀಮಠದ ಅಧ್ಯಕ್ಷರಾದ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಆದರದಿಂದ ಸ್ವಾಗತಿಸಿದರು. ಪ್ರಧಾನಮಂತ್ರಿಗಳು ಪೂಜ್ಯರ ಕಛೇರಿಗೆ ಆಗಮಿಸುತ್ತಿದ್ದಂತೆ ಪೂಜ್ಯರು ಸಂತೋಷ ಮತ್ತು ಉತ್ಸಾಹದಿಂದ ಎದ್ದುನಿಂತು ಬರಮಾಡಿಕೊಂಡಿದ್ದು ವಿಶೇಷವಾಗಿತ್ತು. ಮುಂದಿನ ಪೀಳಿಗೆಗೆ ದಾರಿದೀಪವಾಗಿತ್ತು. ಸನ್ಮಾನ್ಯ ನರೇಂದ್ರ ಮೋದಿಯವರು ಪೂಜ್ಯರ ಪಾದ ಮುಟ್ಟಿ ನಮಸ್ಕರಿಸಿದ್ದು ಅವರ ಉನ್ನತ ಸಂಸ್ಕಾರಕ್ಕೆ ಸಾಕ್ಷಿಯಾಗಿತ್ತು. ಪ್ರಧಾನಮಂತ್ರಿಯಾದವರಿಗೆ ಬಿಡುವಿಲ್ಲದ ಕಾರ್ಯಗಳಿರುವುದರಿಂದ ಅಧಿಕೃತವಾಗಿ ಆಹ್ವಾನಿಸಿದರೂ ಬರುವುದು ಕಷ್ಟವಾಗಿರುವಾಗ, ಅನಾಯಾಸ ವಾಗಿ ದೊರೆತ ಅವಕಾಶವನ್ನು ಈಗಿನ ಪ್ರಧಾನಿ ನರೇಂದ್ರ ಮೋದಿಯವರು ಸದ್ಬಳಕೆ ಮಾಡಿಕೊಂಡು ಸಾರ್ಥಕ ಪಡಿಸಿ ಕೊಂಡರು. ಅದೊಂದು ಸಂತ-ಶಿವಯೋಗಿಯ ಸಮಾಗಮವಾಗಿ ಚಾರಿತ್ರಿಕ ಘಟನೆಯಾಯಿತು.

ಪೂಜ್ಯರ ಸಾಧನೆ, ಸಿದ್ಧಿಯ ಬಗ್ಗೆ ಹೃದಯಾರೆ ಕೊಂಡಾಡಿದ ಪ್ರದಾನಿಯವರು ಪೂಜ್ಯರನ್ನು ಕುರಿತು ಅವರ ಹೃದಯಾಳದ ಅನಿಸಿಕೆಗಳನ್ನು ಅವರದೇ ಮಾತಿನಲ್ಲಿ ಹೇಳಿದ್ದು ಹೀಗೆ **'ನಿಮ್ಮ ಆರೋಗ್ಯ ಹೇಗಿದೆ, ನಿಮ್ಮ ಜನ್ಮದಿನ ಏಪ್ರಿಲ್ ೧ ಎಂಬುದನ್ನು ತಿಳಿದುಕೊಂಡಿದ್ದೇನೆ. ೧೦೭ನೇ ವರ್ಷಕ್ಕೆ ಕಾಲಿಟ್ಟಿರುವ ನಿಮ್ಮಂಥ ಕಾಯಕಜೀವಿ, ಸಮಾಜಕ್ಕೆ ಸಮರ್ಪಿಸಿಕೊಂಡ ಗುರುಗಳ ಆಶೀರ್ವಾದ ನನಗೆ ಬೇಕು ಎಂದು ಆಶಿಸಿದರು. ಅದಕ್ಕೆ ಉತ್ತರವಾಗಿ ಪೂಜ್ಯರು ಈ ದೇಶದ ಜನತೆ ನಿಮ್ಮ ಮೇಲೆ ಅಪಾರ ಭರವಸೆ ಇಟ್ಟುಕೊಂಡಿದ್ದಾರೆ. ಉತ್ತಮ ಕೆಲಸ ಮಾಡಿ. ಒಳ್ಳೆಯ ದಾರಿಯಲ್ಲಿ ಹೋಗುತ್ತಿದ್ದೀರಿ. ಸಂಪುಟದ ಸಹೋದ್ಯೋಗಿಗಳು ಕೂಡ ನಿಮ್ಮ ಹಾದಿಯಲ್ಲೇ ಸಾಗುತ್ತಿದ್ದಾರೆ. ದೇಶದ ಒಳಿತಿಗೆ ಇದಕ್ಕಿಂತ ಇನ್ನೇನು ಬೇಕು? ಇದನ್ನು ಮುಂದುವರೆಸಿ ಎಂದು ಶ್ರೀಗಳು ಆಶೀರ್ವದಿಸಿದರು.**

ಶ್ರೀಮಠದ ವಿದ್ಯಾರ್ಥಿಗಳನ್ನು ಕುರಿತು ಸನ್ಮಾನ್ಯಶ್ರೀ ನರೇಂದ್ರಮೋದಿಯವರು ಮಾಡಿದ ಭಾಷಣ ಉದ್ಬೋದಕವಾಗಿತ್ತು. ವಿದ್ಯಾರ್ಥಿಗಳು ಭಾಗವಹಿಸಿದವರೆಲ್ಲರು, ಅವರ ಮಾತುಗಳಿಂದ ಮೂಕವಿಸ್ಮಿತರಾಗಿದ್ದರು. Unless one speak from his heart, He can not touch the heart of others ಎನ್ನುವ ಮಾತನ್ನು ನೆನಪಿಸಿಕೊಂಡೇ ಸನ್ಮಾನ್ಯ ನರೇಂದ್ರ ಮೋದಿಯವರ ಅಂತರಾಳದ ಮಾತು ಗಳು ಎಲ್ಲರ ಹೃದಯಮುಟ್ಟಿದವು. ಇದೊಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಐತಿಹಾಸಿಕ ಘಟನೆ ಯಾಗಿ ಬಹಳ ಕಾಲ ನೆನಪಿಡುವ ಕಾರ್ಯಕ್ರಮವಾಗಿ ಪರಿವರ್ತನೆ ಯಾಗಿತ್ತು. ಅಪೂರ್ವ ಕಾರ್ಯಕ್ರಮಕ್ಕೆ ಕಾರಣರಾದವ ರೆಲ್ಲರಿಗೂ ಶ್ರೀಮಠದ ವಂದನೆಗಳನ್ನು ಸಲ್ಲಿಸುತ್ತದೆ.

ಶ್ರೀ ನರೇಂದ್ರ ಮೋದಿಯವರ ಶ್ರೀಮಠದ ಭೇಟಿಯ ಬಗ್ಗೆ ಪ್ರಮುಖ ದಿನ ಪತ್ರಿಕೆಗಳಲ್ಲಿ ಪ್ರಕಟವಾದ ವರದಿಯನ್ನು ಓದುಗರ ಗಮನಕ್ಕಾಗಿ ಯಥಾವತ್ತಾಗಿ ಈ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ. ಪ್ರಧಾನ ಮಂತ್ರಿಯವರು ಹಿಂದಿಯಲ್ಲಿ ಮಾಡಿದ ಭಾಷಣವನ್ನು ಕನ್ನಡ ಹಾಗೂ ಇಂಗ್ಲಿಷಿನಲ್ಲಿ ಭಾಷಾಂತರಿಸಿ ಮುದ್ರಿಸಲಾಗಿದೆ.

> 'ಕರ್ನಾಟಕದ ಮೂಲೆಯಲ್ಲಿರುವ ೧೦೭ ವರ್ಷದ ಶ್ರೀ ಶಿವಕುಮಾರ ಸ್ವಾಮೀಜಿ ಅವರ ಹೃದಯವು ಕಾಶ್ಮೀರದಲ್ಲಿ ಪ್ರವಾಹದಿಂದ ನೊಂದ ಭಾರತೀಯರ ಕಷ್ಟಕ್ಕೆ ಮಿಡಿಯುತ್ತೆ. ಇಂಥ ಜಾಗಕ್ಕೆ ಬರಲು-ಸ್ವಾಮೀಜಿ ಪಾದದ ಹತ್ತಿರ ಕುಳಿತುಕೊಳ್ಳಲು ಅವಕಾಶ ಸಿಕ್ಕಿದ್ದು ನನ್ನ ಭಾಗ್ಯ'.
>
> **- ಶ್ರೀ ನರೇಂದ್ರ ಮೋದಿಯವರು**
> ಪ್ರಧಾನಮಂತ್ರಿಗಳು





# ಭಾರತದ ಗೌರವಾನ್ವಿತ ಪ್ರಧಾನಿಗಳಾದ ಸನ್ಮಾನ್ಯ ಶ್ರೀ ನರೇಂದ್ರ ಮೋದಿಯವರು ಶ್ರೀ ಸಿದ್ಧಗಂಗಾಮಠಕ್ಕೆ ಭೇಟಿ ನೀಡಿದ್ದ ಸಂದರ್ಭದಲ್ಲಿ ಹಿಂದಿಯಲ್ಲಿ ಮಾಡಿದ ಭಾಷಣದ ಕನ್ನಡ ಅನುವಾದ

ಪರಮಪೂಜ್ಯ ಸ್ವಾಮೀಜಿ, ಕರ್ನಾಟಕ ರಾಜ್ಯಪಾಲ ವಜುಬಾಯಿವಾಲಾ, ಪೂಜ್ಯ ಸಂತರುಗಳೇ, ಎಲ್ಲಾ ವರಿಷ್ಠ ಮಹಾನುಭಾವರೇ ಮತ್ತು ಯುವಕರೇ. ಇಲ್ಲಿನ ಎಲ್ಲಾ ಸ್ವಾಮಿಗಳು ಗುಜರಾತಿನ ನನ್ನ ಮನೆಗೆ ಬಂದಿದ್ದರು ಮತ್ತು ನನಗೆ ಒತ್ತಾಯದ ಆಹ್ವಾನವನ್ನು ನೀಡಿದ್ದರು. ನೀವು ತುಮಕೂರಿಗೆ ಬನ್ನಿರಿ, ನಮ್ಮ ಮಠಕ್ಕೆ ಬನ್ನಿರಿ ಎಂದು. ಆದರೆ ಮುಖ್ಯಮಂತ್ರಿಯಾದಾಗ ಬದಲಾಗಲಿಲ್ಲ, ಆದರೆ ಪ್ರಾಯಶಃ ಪೂಜ್ಯ ಸ್ವಾಮೀಜಿಯವರ ಇಚ್ಛೆಯಂತೆ ಮುಖ್ಯಮಂತ್ರಿಯುಗಿ ಅಲ್ಲ, ಪ್ರಧಾನಮಂತ್ರಿಯಾಗಿ ಬಂದಿದ್ದೇನೆ. ಇಂದು ಒಂದು ಪವಿತ್ರವಾದ ಸಂದರ್ಭ, ಸಾಧುಗಳು ಹೇಳುತ್ತಾರೆ- ಇಂದಿನ ಪ್ರಾತಃಕಾಲದ ಸಮಯ ಅಂದರೆ ಅಮಾವಾಸ್ಯೆಯ ಸಮಯ ಇನ್ನೂರು ವರ್ಷಗಳಿಗೆ ಒಂದು ಸಲ ಬರುತ್ತದೆ ಹಾಗೂ ನಮ್ಮ ಎಲ್ಲಾ ಪೂರ್ವಜರಿಗೆ ನೆನಪಿಗೆ ಗೌರವವನ್ನು ಅರ್ಪಿಸುವ ಹಬ್ಬವಾಗಿ ಆಚರಿಸಲಾಗುತ್ತದೆ. ಇಂದು ಇನ್ನೊಂದು ದೃಷ್ಟಿಯಲ್ಲೂ ಇಡೀ ದೇಶ ಹೆಮ್ಮೆಪಡಬಹುದಾದ ಮಹತ್ವಪೂರ್ಣ ದಿನ, ನಾನು ಆ ಕಾರ್ಯಕ್ರಮದಿಂದ ಇಲ್ಲಿಗೆ ಬಂದಿದ್ದೇನೆ. ಒಂದು ವರ್ಷದ ಮೊದಲು ಭಾರತದಲ್ಲಿ ಮೊತ್ತಮೊದಲ ಅಂತರಗ್ರಹ ಕಾರ್ಯಕ್ರಮ ಮಂಗಳಯಾನ (ಮಾರ್ಸ್ ಆರ್ಬಿಟರ್ ಮಿಷನ್)ದ ಕೆಲಸ ಆರಂಭವಾಗಿತ್ತು. ಮಂಗಳಗ್ರಹಕ್ಕೆ ಹೋಗಲು ನೌಕೆಯನ್ನು ಕಳುಹಿಸಲಾಗಿತ್ತು. ಇದು ಅಲ್ಲಿನ ವಿವರಗಳನ್ನು ನಮಗೆ ನೀಡಬೇಕಾಗಿತ್ತು. ಸುಮಾರು ೬೫ ಕೋಟಿ ಮೈಲಿಗಳ ಯಾತ್ರೆಯನ್ನು ಮಾಡಿ ಆ ಯಾನ ಇಂದು ಮಂಗಳ ಗ್ರಹಕ್ಕೆ ಪ್ರವೇಶ ಮಾಡಿತು. ವಿಶ್ವದಲ್ಲೆಲ್ಲಾ ಮೊದಲ ಪ್ರಯತ್ನದಲ್ಲಿಯೇ ಈ ಪ್ರಯೋಗದಲ್ಲಿ ಯಶಸ್ಸು ಪಡೆದ ದೇಶ ನಮ್ಮ ಭಾರತ, ನಮ್ಮ ವಿಜ್ಞಾನಿಗಳು ಈ ಸಾಧನೆಯನ್ನು ಮಾಡಿದ್ದಾರೆ. ಅವರ ಗೌರವಾರ್ಥವಾಗಿ ಇಲ್ಲಿ ನೆರೆದಿರುವ ಎಲ್ಲರಿಗೂ ನಾನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಎಲ್ಲರೂ ಎದ್ದುನಿಂತು ಚಪ್ಪಾಳೆ ತಟ್ಟುವ ಮೂಲಕ ಈ ಮಹಾನ್ ಸಾಧನೆಗಾಗಿ ಎಲ್ಲಾ ವಿಜ್ಞಾನಿಗಳನ್ನು ಅಭಿನಂದಿಸೋಣ. ಇದು ಒಂದು ಮಂಗಳಕರ ಹಬ್ಬದ ಸಂದರ್ಭ, ಮಂಗಳಯಾನದ ಯಶಸ್ವಿ ಒಂದು ಮಂಗಳಕರ ಹಬ್ಬ. ನಮ್ಮ ವಿಜ್ಞಾನಿಗಳು ಒಂದು ದೊಡ್ಡ ಸಾಧನೆಯನ್ನು ಮಾಡುತ್ತಿದ್ದಾರೆ.

ಇಲ್ಲಿನ ಎಲ್ಲಾ ವಿದ್ಯಾರ್ಥಿಗಳು ಭಾಗ್ಯಶಾಲಿಗಳು, ನಿಮಗೆ ಇಲ್ಲಿ ಆಧುನಿಕ ವಿಜ್ಞಾನದ ಜೊತೆಗೆ ಸಂಸ್ಕೃತ ಭಾಷೆಯ ಶಿಕ್ಷಣವನ್ನು ನೀಡಲಾಗುತ್ತಿದೆ. ನಮ್ಮ ಪೂರ್ವಜರು ವೇದಗಳ ರಚನೆ ಮಾಡಿದರು. ಅಗಾಧವಾದ ಸಾಹಿತ್ಯ ನಮ್ಮ ಶಾಸ್ತ್ರಗಳಲ್ಲಿದೆ, ಆದರೆ ನಮ್ಮ ಶಾಸ್ತ್ರಗಳು ಹೆಚ್ಚಾಗಿ ಸಂಸ್ಕೃತ ಭಾಷೆಯಲ್ಲಿದೆ. ನೀವುಗಳು ಸಂಸ್ಕೃತ ಭಾಷೆಯ ಅಧ್ಯಯನ ಮಾಡುತ್ತಿದ್ದೀರಿ. ಈ ಅಧ್ಯಯನದ ಜೊತೆಗೆ ನಮ್ಮ ಪೂರ್ವಜರು ಸಂಸ್ಕೃತ ಭಾಷೆಯಲ್ಲಿ ನೀಡಿರುವ ಜ್ಞಾನ-ವಿಜ್ಞಾನವನ್ನು ಕಂಡುಹಿಡಿಯಿರಿ. ಮುಂಬರುವ ಪೀಳಿಗೆಗೆ ನಮ್ಮ ಪೂರ್ವಜರು ಶಾಸ್ತ್ರಗಳಲ್ಲಿ ಏನು ಹೇಳಿದ್ದಾರೆ ಎಂಬುದನ್ನು ತಿಳಿಸಿರಿ. ಇಂದು ಜಗತ್ತು ಭೂಮಿಯ ಉಷ್ಣತೆ(ಗ್ಲೋಬಲ್ ವಾರ್ಮಿಂಗ್)ಯು ಬಗ್ಗೆ ಚಿಂತೆಗೊಂಡಿದೆ. ಪರಿಸರದ ಬಗ್ಗೆ ಗಾಬರಿಗೊಂಡಿದೆ. ನಮ್ಮ ವೇದಗಳನ್ನು ಓದಿದರೆ ನಾವುಗಳು ಹೇಗೆ ಬದುಕಬೇಕೆಂದು ಗೊತ್ತಾಗುತ್ತದೆ. ಪ್ರಕೃತಿಯೊಡನೆ ಜೀವಿಸುವುದರ ಬಗ್ಗೆ ಅರಿವಾಗುತ್ತದೆ. ಆದ್ದರಿಂದ ತಾವುಗಳು ಸಂಸ್ಕೃತದ ಮಾಧ್ಯಮದಲ್ಲಿ ಅಧ್ಯಯನ ಮಾಡುತ್ತಿದ್ದೀರಿ. ನಿಮ್ಮಗಳಿಗೆ ದೇಶ ಸೇವೆ ಮಾಡಲು ಒಳ್ಳೆಯ ಅವಕಾಶಗಳಿವೆ.

ನಮ್ಮ ದೇಶದ ಜನರಲ್ಲಿ ಇರುವ ಕಲ್ಪನೆ ಏನೆಂದರೆ ನಮ್ಮ ಸಾಧು, ಸಂತರು ನಮ್ಮ ಮಠ-ಮಂದಿರಗಳು ಯಾವ ಕೆಲಸವನ್ನು ಮಾಡುವುದಿಲ್ಲ. ಎಲ್ಲಾ ಮಹಾತ್ಮರು ಸುಖವನ್ನು ಅನುಭವಿಸುತ್ತಾರೆ. ಲಾಡುಗಳನ್ನು ತಿನ್ನುತ್ತಾರೆ, ಜನರುಗಳು ಇವರ ಹತ್ತಿರ ಬರುತ್ತಾರೆ ಹಾಗೂ ಅವರ ಪಾದಗಳಿಗೆ ನಮಸ್ಕಾರ ಮಾಡುತ್ತಾರೆ. ಈ ರೀತಿಯ ಭ್ರಮೆಗಳನ್ನು ಹರಡಲಾಗಿದೆ. ಆದರೆ ಸಾಧು, ಸಂತರುಗಳೇ ಈ ದೇಶದ ನಿರ್ಮಾಣವನ್ನು ಮಾಡಿದ್ದಾರೆ. ಈ ಋಷಿಮುನಿಗಳೂ ತಮ್ಮ

ತಪಸ್ಸಿನಿಂದ ದೇಶವನ್ನು ಕಟ್ಟಿದ್ದಾರೆ ಹಾಗೂ ಇಂದಿಗೂ ಎಲ್ಲಾ ಮಠ-ಮಂದಿರಗಳು, ಋಷಿಮುನಿಗಳು ಸಮಾಜದ ಕಲ್ಯಾಣಕ್ಕಾಗಿ ಕೆಲಸ ಮಾಡುತ್ತಿದ್ದಾರೆ. ಇದಕ್ಕಾಗಿಯೇ ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದಾರೆ. ಅವರಿಗೆ ಜನ ಸೇವೆಯೇ ಪ್ರಭುವಿನ ಸೇವೆ, ಇದೇ ಅವರ ಮಂತ್ರ ಮತ್ತು ನಮ್ಮ ಈ ಮಹಾನ್ ಪರಂಪರೆ ನಮಗೆ ಸಂಸ್ಕಾರವನ್ನು ಕೊಟ್ಟಿದೆ, ಜೀವನ ನಡೆಸುವ ಸರಿಯಾದ ದಾರಿಯನ್ನು ತೋರಿಸಿ ಕೊಟ್ಟಿದೆ, ಜೀವನದ ಉದ್ದೇಶವನ್ನು ತಿಳಿಸಿದೆ. ಜೀವನ ನಡೆಸಲು ಪ್ರೇರಣೆಯನ್ನು ನೀಡಿದೆ- ಈ ರೀತಿಯ ಎಲ್ಲಾ ಸಂತರು, ಮಹಂತರು, ಋಷಿಮುನಿಗಳು, ಆಚಾರ್ಯರು ಎಲ್ಲರಿಗೂ ನಮಿಸುತ್ತಾ ನಾವುಗಳು ಸಹ ಈ ದೇಶ ಮತ್ತು ಸಮಾಜಕ್ಕಾಗಿ ಏನನ್ನಾದರೂ ಮಾಡುವ ಸಂಕಲ್ಪವನ್ನು ಮಾಡೋಣ. ನನ್ನ ಜೊತೆ ಸಂಕಲ್ಪ ಮಾಡುತ್ತೀರಾ? ನಾನು ನನ್ನ ದೇಶವಾಸಿಗಳಿಗೆ ಪ್ರಾರ್ಥನೆ ಮಾಡಿದ್ದೇವೆ ಹಾಗೂ ಮಾಡುತ್ತಿದ್ದೇನೆ. ನೀವುಗಳು ಒಂದು ವರ್ಷದಲ್ಲಿ ನೂರು ಗಂಟೆಗಳನ್ನು ನನಗೆ ಭಿಕ್ಷೆಯನ್ನಾಗಿ ನೀಡಿರಿ, ನೀವುಗಳು ಸಾಧುಸಂತರಿಗೆ ಭಿಕ್ಷೆಯನ್ನು ನೀಡು ತ್ತೀರಲ್ಲವೋ ಹಾಗೆಯೇ ನನಗೂ ಸಹ ನೀಡಿ. ನಾನು ನಿಮಗೆ ನಷ್ಟವಾಗುವುದನ್ನು ಕೇಳುವುದಿಲ್ಲ, ನನಗೆ ವರ್ಷಕ್ಕೆ ನೂರು ಗಂಟೆ ಕೊಡಿ, ಇಡೀ ವರ್ಷಕ್ಕೆ ೧೦೦ ಗಂಟೆ, ವಾರಕ್ಕೆ ಎಷ್ಟು ಗಂಟೆ ಕೊಡಬೇಕಾಗುತ್ತದೆ-ಎರಡು ಗಂಟೆ. ಈ ಎರಡು ಗಂಟೆ ಸ್ವಚ್ಛತೆಯ ಕೆಲಸಕ್ಕೆ. ನಾವು ಎಲ್ಲಿ ವಾಸ ಮಾಡುತ್ತೇವೆ ಅಲ್ಲಿ ಅಲ್ಲ, ಯಾವುದಾದರೂ ಹಳ್ಳಿಗೆ ಹೋಗೋಣ, ಯಾವುದಾದರೂ ಕೊಳಚೆ ಪ್ರದೇಶಕ್ಕೆ ಹೋಗೋಣ, ಯಾವುದಾದರೂ ಮೊಹಲ್ಲಾ(ಬಡಾವಣೆ)ಗೆ ಹೋಗೋಣ, ಆದರೆ ನಾವು ನಮ್ಮ ದೇಶವನ್ನು ಕೊಳಕಾಗಿ ಡುವುದು ಬೇಡ, ಈ ಬಗ್ಗೆ ಸಂಕಲ್ಪ ಮಾಡೋಣವೇ? ನಿಮ್ಮಲ್ಲಿ ಯಾರಿಗಾದರೂ ಕೊಳಕಾಗಿರುವುದು ಇಷ್ಟವೇ? ನಿಮಗೆ ಸ್ವಚ್ಛತೆ ಇಷ್ಟವಿಲ್ಲವೇ? ದೇಶದ ೧೨೫ ಕೋಟಿ ಜನರು ನಾವು ಕೊಳಕಾಗಿರುವುದನ್ನು ಬಯಸದಿದ್ದರೆ ದೇಶ ಕೊಳಕಾಗಿರುತ್ತದಾ? ನಮ್ಮ ಹಳ್ಳಿ ಕೊಳಕಾಗಿರುತ್ತದಾ? ನಮ್ಮ ಮೊಹಲ್ಲಾ ಕೊಳಕಾಗಿರುತ್ತದಾ? ನಮ್ಮ ಮನೆ ಕೊಳಕಾ ಗಿರುತ್ತದಾ? ನಾವು ಕೊಳಕಾಗಿರುತ್ತೇವಾ? ಇಲ್ಲವಲ್ಲವೇ, ಹಾಗಾದರೆ ನಾವು ಈ ಬಗ್ಗೆ ಸಂಕಲ್ಪ ಮಾಡೋಣ.

ಮಹಾತ್ಮ ಗಾಂಧೀಜಿಯವರಿಗೆ ಎಲ್ಲಕ್ಕಿಂತ ಪ್ರಿಯವಾದ ವಿಷಯಗಳೆಂದರೆ ಭಾರತದ ಸ್ವಾತಂತ್ರ್ಯ ಎರಡನೆಯದು ಸ್ವಚ್ಛತೆ, ಗಾಂಧೀಜಿಯವರು ಯಾವಾಗಲೂ ಸ್ವಚ್ಛತೆ ಹಾಗೂ ಶುಭ್ರತೆಗೆ ಒತ್ತು ಕೊಡುತ್ತಿದ್ದರು. ಮಹಾತ್ಮಾ ಗಾಂಧೀಜಿಯವರು ನಮ್ಮ ದೇಶಕ್ಕೆ ಸ್ವಾತಂತ್ರ್ಯವನ್ನು ತಂದು ಕೊಟ್ಟರು ನಾವು ಅವರಿಗೆ ಸ್ವಚ್ಛವಾದ ಭಾರತವನ್ನು ಕೊಡೋಣವೇ? ನಾವು ಕೊಡಬಲ್ಲೆವು, ನಾವು ಮಹಾತ್ಮ ಗಾಂಧೀಜಿಯವರಿಗೆ ಸ್ವಚ್ಛ ಭಾರತವನ್ನು ಕೊಡಬೇಕು. ಕೊಟ್ಟೇ ಕೊಡುತ್ತೇವೆ. ಇದು ನಮ್ಮ ಸಂಕಲ್ಪ. ಇದನ್ನು ನಾವು ಪೂರೈಸುತ್ತೇವೆ. ಪೂಜ್ಯ ಸ್ವಾಮೀಜಿಯವರ ಆಶೀರ್ವಾದದಿಂದ ನಾವು ಇದರಲ್ಲಿ ಸಫಲರಾಗುತ್ತೇವೆಂಬ ಪೂರ್ಣವಿಶ್ವಾಸ ನಮಗಿದೆ.

ಕರ್ನಾಟಕದ ಒಂದು ಮೂಲೆಯಲ್ಲಿ ಸ್ವಾಮೀಜಿಯವರು ವಿರಾಜಿಸುತ್ತಿದ್ದಾರೆ, ಒಂದು ನೂರಾ ಏಳು ವರ್ಷ ವಯಸ್ಸು ಪೂಜ್ಯ ಸ್ವಾಮೀಜಿಗಳಿಗೆ, ಆದರೆ ಅವರು ಹೇಗೆ ಯೋಚಿಸುತ್ತಾರೆ ನೋಡಿ? ನಾನು ಇಲ್ಲಿಗೆ ಬಂದಾಗ ಅವರು ಏನು ಮಾಡಿದಾರಾ ಗೊತ್ತಾ? ಮೋದಿಜಿ ನೀವು ೨೫ ಲಕ್ಷ ರೂಪಾಯಿ ಕಾಶ್ಮೀರ ಪ್ರವಾಹ ಪೀಡಿತರಿಗೆ ತೆಗೆದುಕೊಂಡು ಹೋಗಿ ಎಂದು ಹೇಳಿದರು. ನೋಡಿರಿ ಈ ದೇಶದ ಏಕತೆ ಹೇಗಿದೆ? ದಕ್ಷಿಣದ ಒಬ್ಬರು ಸ್ವಾಮೀಜಿ ತ್ಯಾಗ ಹಾಗೂ ತಪಸ್ಸಿನ ಮೂರ್ತಿ ಹಣ ನೀಡುತ್ತಿದ್ದಾರೆ, ಕಾಶ್ಮೀರ ಪ್ರವಾಹಪೀಡಿತರಿಗೆ ಇದು ನಮ್ಮ ದೇಶದ ಬಹು ದೊಡ್ಡ ಶಕ್ತಿ. ಪೂಜ್ಯ ಸ್ವಾಮೀಜಿಯವರ ಆಶೀರ್ವಾದದಿಂದ ಭಾರತದ ಭವಿಷ್ಯ ಬದಲಾಗುತ್ತದೆ ಎಂಬುದರಲ್ಲಿ ನನಗೆ ಪೂರ್ತಿ ನಂಬಿಕೆಯಿದೆ. ಇಂದು ನಮಗೆ ಪೂಜ್ಯ ಸ್ವಾಮೀಜಿ ಯವರ ಪಾದದಡಿಯಲ್ಲಿ ಕುಳಿತುಕೊಳ್ಳುವ ಸದಾವಕಾಶ ದೊರಕಿದೆ. ಅವರ ದರ್ಶನ ಭಾಗ್ಯ ದೊರಕಿತು. ನಾನು ಇನ್ನೊಮ್ಮೆ ಪೂಜ್ಯ ಸ್ವಾಮೀಜಿಯವರಿಗೆ ನಮಸ್ಕರಿಸುತ್ತೇನೆ. ಎಲ್ಲಾ ಸಂತರಿಗೆ ನಮಸ್ಕರಿಸುತ್ತೇನೆ. ಭಾರತದ ಮಹಾನ್ ಸಂಸ್ಕೃತಿಗೆ ವಂದಿಸುತ್ತೇನೆ. ಬದುಕುವ ಉತ್ಸಾಹ ತುಂಬಿದ ಹಾಗೂ ಸಂಸ್ಕೃತ ಭಾಷೆಯನ್ನು ಕಲಿಯುವ ಪ್ರಯತ್ನ ಮಾಡುತ್ತಿರುವ ನಿಮ್ಮಂತಹ ಯುವ ಜೊತೆಗಾರರನ್ನು ಹೃದಯತುಂಬಿ ಅಭಿನಂದಿಸುತ್ತೇನೆ. ನನ್ನ ಜೊತೆ ನೀವೆಲ್ಲಾ ಹೇಳಿರಿ. ಭಾರತ್ ಮಾತಾ ಕೀ ಜೈ, ಭಾರತ್ ಮಾತಾ ಕೀ ಜೈ, ಮುಷ್ಟಿ ಮುಚ್ಚಿಕೊಂಡು ಪೂರ್ಣಶಕ್ತಿಯಿಂದ ಹೇಳಿ ಭಾರತ್ ಮಾತಾ ಕೀ ಜೈ, ಭಾರತ್ ಮಾತಾ ಕೀ ಜೈ.

**ಕನ್ನಡ ಅನುವಾದ : ಡಾ|| ಹೆಚ್.ಜಿ ಸದಾಶಿವಯ್ಯ**
ಹಿಂದಿ ಉಪನ್ಯಾಸಕರು,
ಶ್ರೀ ಸಿದ್ಧಗಂಗಾ ಮಹಿಳಾ ಪದವಿ ಕಾಲೇಜು.





## दिनांक २४-०९-२०१४, बुद्दवार के दिन, भारत के गौरवान्वित प्रधानमंत्री सन्मान्य श्री नरेंद्र मोदी जी, तुमकूर के श्री सिद्धगंगा मठ में, भेंट के संदर्भ में दिए भाषण

परमपूज्य स्वामीजी कर्नाटक के गर्वनर, आदरणीय वाजू भाई वाला जी, पूज्य संतगण सभी वरिष्ठ महानुभाव, नवजवान साथियों, कुछ वर्ष पूर्व यहाँ के सब स्वामी जी, गुजरात में मेरे घर पर आये थे, और मुझे बड़े आग्रह से निमंत्रण दिया था कि आप तुमकूर आइए । हमारे मठ पर आये, लेकिन मुख्यमंत्री के रहते नहीं आ पाया, शायद स्वामीजी की मन इच्छा होगी कि मुख्यमंत्री नहीं, प्रधानमंत्री बन कर आ जाये ।

आज एक ऐसा पवित्र औसर है साधुगण कहते है कि आज का प्रातःकाल का समय जो है अमावश्या का दो सौ वर्षो में एक बार आती है । आज सभी पूर्वजों के कल्याण का पर्व मनाया जाता है । हमारी परंपरा, आज का एक महत्वपूर्ण यह भी है । इस कार्य में से आ रहा हूँ जिस के लिए पूरा हिन्दुस्तान गर्व कर सकता है । एक वर्ष पूर्व भारत ने, एक मार्स अरबीट मिशन का कार्यक्रम शुरु किया, मंगलग्रह पर जाने से वहाँ की जानकारी मिलती है । करीब ६५ करोड़ मील की यात्रा करके कोई यहाँ मंगल यान के अरबीट पर प्रवेश करें । दुनिया में भारत एक पहला देश है, जिसने पहले ही प्रयत्न में सफलता प्राप्त की, और इसलिए हमारे जो वैज्ञानिकों ने यह सिद्धी प्राप्त की है । उनके सम्मान में मैं यहाँ उपस्थित सभी से प्रार्थना करता हूँ, कि हम खड़े होकर ताली बजांके, भारत की महा सिद्धी के लिए और हमारे सभी वैज्ञानिकों का अभिनंदन करें । यह मंगल पर्व का अवसर है । मंगल यान में सफलता हमारे लिए मंगल पर्व है । हमारे वैज्ञानिकोने बहुत यह बड़ी सिद्धी कर रहे है । मैं यहाँ सब विद्यार्थियों से प्रार्थना करता हूँ, कि आप भाग्यशाली है एक आप को आधुनिक विज्ञान के साथ संस्कृत का भी ज्ञान मिल रहा है । हमारे पूर्वजों ने वेदों की रचना की, उपनिषदों की रचना की, स्मृति, स्मृतियों की परंपरा की रचना की। पूरे मानव कल्याण के लिए अघाद साहित्य हमारे शास्त्रों में है लेकिन हमारे शास्त्र ज्यादातर संस्कृत भाषा में है, और संस्कृत की साधना करते है, लेकिन संस्कृत की साधना के साथ-साथ हमारें पूर्वजों ने संस्कृत भाषा में जो ज्ञान और विज्ञान परोसा है । आप उसे खोज़ निकालिए, आने वाले पीढ़ी बतायेंगे कि पूर्वजों ने शास्त्रों में बताया था । वह क्या था? अगर वो वेद देखें, आज दुनिया ग्लोबल वार्मिंग से परेशान है । परियावरण को लेकर चिन्तित है । अगर हमारे वेदों को उठाकर देख ले, पर मनुष्य को कैसे जीना चाहिए । प्रकृति के साथ सहसान्विक जीवन कैसा हो ? तो शास्त्रों में पूरी तरह लिखा है, और इसलिए आप जो संस्कृत के माध्यम से शिक्षा ले रहे है । उनके लिए देश की बहुत बड़ी सेवा करने का अवसर है ।

कभी-कभी हमारे देश में कल्पना है, कि हमारे साधु, महात्मा, हमारे मठ, मंदिर कुछ नहीं करते है । सभी महात्मा लोग मौज करते है, लड्डू खाते है, लोग आते है उनके पैर छूते है ऐसा एक भ्रम फैलाया, यह देश इन्ही संतो ने बनाया है । आज भी सभी मठ, मंदिर, ऋषि,

मुनि समाज कल्याण के लिए काम करते है वह अपना पूरा जीवन बिता देते है । उनके लिए जन सेवा ही प्रभुसेवा यही मंत्र रहा है । और इसलिए हमारी इस महान परंपरा जिसने हमें संस्कार दिये, संस्कृति दी जीवन जीने का सही रास्ता दिखाया। जीवन जीने का उद्देश्य बताया, जीवन जीने की प्रेरणा दी । ऐसे सभी संतो महन्तों मुनियों, ऋषियों, आचार्यों भगवतों सब को प्रणाम करते हुए, हम भी देश और समाज के लिए कुछ करने का संकल्प करें । करेंगे.... करेंगे...... मेरी बात समझ में आई..... मैं देशवासियों से प्रार्थना की है । मैं देश वासियों से प्रार्थना करता हूँ, कि एक साल में सौ घंटे मुझे भिक्षा में दीजिए। आप संतो को भिक्षा देते है ना, मुझे भिक्षा देंगे/. मैं वह नहीं माँगूंगा जो लुट जाय, मुझे आपसे सौ घन्टें चाहिए, देंगे? १०० हवर्स पूरे साल में...... एक हफ्ता में कितने घन्टें देना होता है ? एक हफ्ता में दो घंटे दे सकते है ? ....... इन दो घन्टों में क्या करेंगे?

दो घन्टे सफाई के लिए, वहाँ जहाँ हम रहते है नहीं.... कई गाँव में जायेंगे, गंदी बस्ती में जायेंगे, तुमकूरु मोहल्लें में जायेंगे, लिकिन इस देश को गंदा नहीं रहने देंगे । यह संकल्प कर सकते है । आप में से कोई है.... जिसे गंदगी पसंद है.... हमको स्वच्छता पसंद है, है कि नहीं ... बात बात में स्वच्छता पसंद है की नहीं है..? यदि स्वच्छता पसंद है तो स्वच्छ रहना चाहिए कि नहीं..... हमें स्वच्छ रहना चाहिए की नहीं । यदि पूरे देश में सवा सौ करोड़ देश वासियों को तय करना है कि गंदगी नहीं करेंगे । तो देश गंदा होगा क्या ? हमारा गाँव गंदा होगा क्या ? हमारा मोहल्ला गंदा होगा क्या ? हमारा घर गंदा होगा क्या? खुद गंदे होंगे ? नहीं होंगे... नहीं होंगे ना.. हम संकल्प करे ।

महात्मा गाँधी को सबसे प्रिय बात थी । दो एक वह यह था भारत की आज़ादी और दूसरा था सफाई, स्वच्छता । गाँधीजी हर बार स्वच्छता औरं सफाई की आग्रही थें । महात्मा गाँधी जी ने हमें आजादी दी क्या हम महात्मा गाँधी को स्वच्छ भारत दे सकते है ? क्या हम महात्मा गाँधी को स्वच्छ भारत देना चाहिए । हम महात्मा गाँधी जी जो स्वच्छ भारत दे कर रहेंगे यह हमारा संकल्प है, यह संकल्प पूरा करेंगे, पूज्य स्वामीजी का आशीर्वाद हमें सफलता देंगे ऐसा हमारा पूरा विश्वास है ।

कर्नाटक के कोने में स्वामी जी विराजमान है। एक सौ सात साल के स्वामी जी विराजमान है । लेकिन सोंचते कैसा है ? यहाँ मैं आया तो क्या कहा उन्होंने? मोदी जी 'यह २५ लाख रुपया काश्मीर के बाढ़ पीड़ितों के लिए ले जाओ । देखिए इस देश की एकता कैसी है ? दक्षिण में एक स्वामी जी जो त्याग, तपस्या के मूर्ति है । वो भी धन दे रहे है । काश्मीर पीड़ितों के लिए, यह हमारे देश की सबसे बड़ी ताकत है । और पूज्य स्वामी जी के आशीर्वाद से भारत का भाग्य बदलेगा ऐसा मेरा पूरा विश्वास है, मुझे पूज्य स्वामी जी के चरणों में बैठने का अवसर मिला, उनके दर्शन करने का अवसर मिला, मैं फिर एक बार पूज्य स्वामी को प्रणाम करता हूँ । सभी संतों को प्रणाम करता हूँ । भारत के महान संस्कृति को, जीने का प्रयास कर रहे, संस्कृत भाषा को सीखने का प्रयास कर रहे है । सभी नव जवान साथियों को ऋदय से अभिनंदन करता हूँ । मेरे साथ बोलिए भारतमाता की जय ।

दोनों मुठ्ठी बांध करके बोलिए, पूरी ताकत से बोलिए - भारत माता की जय ।
भारत माता की जय ।
भारत माता जी जय ।





## Speech delivered by Mr. Narendra Modi, the honourable Prime Minister at Sree Siddaganga Math, Tumkur on wednesday 24-09-2014

'His Holiness Sree Swamiji, the Governor of Karnataka, honourable Vaju bhai wala ji, worshipful holymen, all the elderly people, and young associates, all the holymen of this place had come to my house at Gujarath a few years ago, and had invited me forcefully to come to Tumkur, and to the Math. But as Chief Minister, I could not come, perhaps it may be Swamiji's wish that I should come as the Prime Minister and not as the Chief Minister.

Today, it is such an important occasion that the holimen say today's morning dawns only once on the New moon day in a period of two hundred years. Today, it is considered to be the auspicious day for all the elderly people. Our tradition considers today as the most important day. The whole of India is feeling proud for the work in which I am engaged. One year back, India started the programme to orbit the Mars, and going around the plant, we got the whole knowledge and information. Undertaking an expedition of nearly 65 crores of miles, we can enter the orbit of Mars. India is the first country in the world, which has become successful in the very first attempt and therefore our scientists have achived this success. Therefore I pray all those who are present here that let us stand up and applaud for the greatest achievement of India and be thankful to all our scientists. It is a holy occasion. Our scientists have been doing much for this kind of great achivement. I call upon all the students here and appeal to them that you are fortunate to get a knowledge of Sankskrit alongwith that of your modern day knowledge of Science. Our ancestors developed the Vedas, the Upanishads, the Smrithis and established its generation. They are the greatest literature which is found in our Shasthras. But most of our Shasthras is in the Sanskrit language, and increases its geateness. But there is knowlegde and science in Sanskrit which our ancestors have mixed closely, you search and distinguish them. The coming generation will expose what the ancestors have said in those Shasthras. What was it? If you look at the Vedas, to-day, the world is worried about global warming, and worried about the global atmosphere. Look at the Vedas, but how can the human beings live? How to live long with nature? It has been scribbled well in the Shasthras(Holy Scripts) and for this reason, why you are being taught through the medium of Sanskrit language. It is why for them, there is a chance to serve the country to a large extent.

There appears now and then a suspicion that our holymen, Mahathmas, Maths and temples do nothing. All the holymen eat laddus, dine as people come and touch their feet. This kind of an illusion has spread. These holymen have built this country. Even now, for the sake of all Maths, mandirs and temples even the groups of holymen work for their development and dedicate their lives entirely. Service to humanity is 'service to God is the only hymn there is'.

Therefore this great inheritance to which we have added a culture, induced a civilization,

denotes the true way to become successful in leading the life. It shows the real aim of living a life, induces a courage to become successful in life. With humble obeisance to all Saints, Mahanthas, Rishis, Acharyas, Bhagawaths and others who encouraged to become successful in life, let us also take a decision to do something to the country and society. We shall do.... shall do.

My words have been understood.... I have made a request to our countrymen. I pray them to offer me one hundred hours in a year. Your offer alms to the saints, is n't it? Do you offer alms to me? I do not ask for the things which can be stolen? I require one hundred hours from you. Will you give it? 100 hours. How many hours can be spared in a week? What can be done within these two hours? We will be here and there for the purpose of cleaning for about two hours. Is n't it? ... Go to any town, we go to places of dirt. Go to the places in Tumkur. But let us not make this country remain dirty. Let us make this decision. Is there any one among you who likes dirt... Cleanliness is liked by us; Is it so or not? If cleanliness is good, we should be clean, is n't it? One and a quarter of the people in the entire country should decide that they would not make anything dirty, then does the country become dirty? Does our town become dirty? Does our area become dirty? Does our home become dirty? Do they become dirty themselves? It doesnot, does not become dirty. Let us take an oath.

Mahathma had liked one thing. He had two visions, such as India's freedom and secondly cleanliness, 'Swatchatha'. Gandhiji always stressed about cleanlines and keeping clean. Mahathma Gandhi gave us freedom. Can not we give Mahathma Gandhi a clean India. We have to give Mahathma Gandhi a clean India. We will certainly offer Mahathma Gandhiji a clean India. It is our decision. We will fulfill this. The blessings of His Holiness Sree Swamiji makes us successful. It is our great and certain faith.

Swamiji is shining in all the nookes and corners of Karnataka. The Swamiji of one hundred and seven years is well known every where. But how does he feel. When I came here, what did he say? 'Modiji receive these twenty five lakh rupees for the sake of the people in Kashmir who are suffering from floods'. Observe how the unity of this country is there. There is a Swamiji in the south who is icon of sacrifice and of Meditation. Even he is offering money here, for the use of the learned Kashmiris. It is the greates strength of all in our country and by the blessings of holy Swamiji, the fortune of India will change. I have such a strong faith. I am lucky to have an opportunity to sit at the feet of Swamiji and a chance to have his darshan. My salutes once again to the revered Swamiji, and to all holymen. They are making an effort to win over the highest culture of India, and here an effort is being made to learn the language Sanskrit. My heartful bleesings. I wish to offer to all our young followers heartful thanks. You say with me, 'Bharath Mathaki Jai'. Fold your fingers in both hand and say with all your might.

Bharath Matha ki jai

Bharath Matha ki jai

Bharath Matha ki jai

– English Translation :
**Sri T.S. RamachandraRao**





# ಸಂತರೆಂದರೆ ದೇಶಕ್ಕೆ ಜೀವನ ಮುಡುಪಿಟ್ಟವರು

**ಸಾ**ಧು, ಸಂತರು ಎಂದರೆ ಮೋಜು, ಮಸ್ತಿ ಮಾಡುವವರು ಎಂಬ ಭ್ರಮೆ ಇದೆ. ಆದರೆ ಅವನು ದೇಶಕ್ಕಾಗಿ ಜೀವವನ್ನೇ ಮುಡುಪಿಟ್ಟಿದ್ದಾರೆ. ಅಂತಹ ಅನುಭವಗಳಾಗಿವೆ ಜೊತೆಗೆ ಸಾಧನೆಯನ್ನು ಕಣ್ಣಾರೆ ಕಂಡಿದ್ದೇನೆಂದು ಪ್ರಧಾನಿ ನರೇಂದ್ರ ಮೋದಿ ಸಂತರ ಬದುಕನ್ನು ಪ್ರಶಂಸಿಸಿದರು.

೧೦೭ ವಸಂತಗಳನ್ನು ಕಂಡಿರುವ ಸಿದ್ಧಗಂಗಾ ಮಠದ ಹಿರಿಯ ಶ್ರೀಗಳನ್ನು ಬಿಗಿಭದ್ರತೆ ನಡುವೆ ಭೇಟಿ ಮಾಡಿ ಆಶೀರ್ವಾದ ಪಡೆದುಕೊಂಡರು. ಬಳಿಕ ಶ್ರೀಮಠದ ವಿದ್ಯಾರ್ಥಿ ಸಮೂಹವನ್ನುದ್ದೇಶಿಸಿ ಮಾತನಾಡಿದ ಅವರು, ಗುಜರಾತ್‌ನ ಮುಖ್ಯಮಂತ್ರಿಗಳಾಗಿದ್ದಾಗ ಶ್ರೀಗಳನ್ನು ಭೇಟಿ ಯಾಗಲು ಸಾಧ್ಯವಾಗಿರಲಿಲ್ಲ. ಈಗ ಪ್ರಧಾನಮಂತ್ರಿಯಾಗಿದ್ದಾಗ ಭೇಟಿ ನೀಡಿ, ಅವರ ಆಶೀರ್ವಾದ ಪಡೆದು ಕೊಂಡಿದ್ದೇನೆ. ಜೊತೆಗೆ ಮಂಗಳಯಾನ ಯಶಸ್ವಿಯಾಗಿದೆ. ಇದೊಂದು ಡಬಲ್ ಧಮಾಕ. ಇಂದಿನಿಂದ ತಮಗೆ ಮಂಗಳ ಪರ್ವ ಆರಂಭ ವಾಗಿದೆ. ಇದೊಂದು ಹೆಮ್ಮೆಯ ಸಂಗತಿ. ವಿಶ್ವದಲ್ಲೇ ಪ್ರಥಮಬಾರಿಗೆ ಮಂಗಳಯಾನ ಯಶಸ್ವಿಯಾಗಿರು ವುದರಿಂದ ಸಾಧಕ ವಿಜ್ಞಾನಿಗಳಿಗೆ ಚಪ್ಪಾಳೆ ಮೂಲಕ ನೀವೆಲ್ಲ ಅಭಿನಂದಿಸಬೇಕು ಎಂದು ಮನವಿ ಮಾಡಿಕೊಂಡರು.

ಆಗ ೧೦ ವಸಂತಗಳನ್ನು ಕಂಡಿರುವ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮೀಜಿ ಸೇರಿದಂತೆ ವಿದ್ಯಾರ್ಥಿಗಳು, ಬೋಧಕರು ಸೇರಿದಂತೆ ನೆರೆದಿದ್ದ ಎಲ್ಲರೂ ಎದ್ದುನಿಂತು ಜೋರಾಗಿ ಚಪ್ಪಾಳೆ ತಟ್ಟಿ, ಅಭಿನಂದಿಸಿದರು.

***ಸ್ವಚ್ಛತೆಗೆ ಮುಂದಾಗಿ :***

ಸಿದ್ಧಗಂಗಾ ಶ್ರೀಗಳು ಸದಾ ದೇಶದ ಅಭಿವೃದ್ಧಿ ಬಗ್ಗೆ ಚಿಂತನೆ ನಡೆಸುತ್ತಾರೆ. ಜಮ್ಮು ಮತ್ತು ಕಾಶ್ಮೀರದಲ್ಲಿ ಉಂಟಾಗಿರುವ ಅನಾಹುತದಲ್ಲಿ ಸಂತ್ರಸ್ತರಿಗೆ ಸಹಾಯ ಕಲ್ಪಿಸುವಂತೆ ತಮಗೆ ೨೫ ಲಕ್ಷ ರೂ. ಚೆಕ್ಕನ್ನು ನೀಡಿದ್ದಾರೆ. ಅವರ ಹೃದಯ ವೈಶ್ಯಾಲ್ಯವೇ ಸಾಧು, ಸಂತರ ಜೀವನ ಏನೆಂಬುದಕ್ಕೆ ಸಾಕ್ಷಿಯಾಗಿದೆ. ತ್ರಿವಿಧ ದಾಸೋಹಿಗಳಾಗಿರುವ ಶ್ರೀಗಳು ಭಾರತೀಯ ಪರಂಪರೆ, ಸಂಸ್ಕಾರವನ್ನು ಮಕ್ಕಳಿಗೆ ತಿಳಿಸುತ್ತಿದ್ದಾರೆ. ಆದ್ದರಿಂದ ಭಾರತ ದೇಶ ಕೊಳಕಾಗದಂತೆ ನೀವೆಲ್ಲ ವಿದ್ಯಾರ್ಥಿ, ಯುವಜನರು ಇಂದಿನಿಂದಲೇ ಸಂಕಲ್ಪ ಮಾಡಬೇಕು ಎಂದರು.

ವರ್ಷಕ್ಕೆ ೧೦೦ ಗಂಟೆ ಸ್ವಚ್ಛತೆಗೆ ತಾವೆಲ್ಲ ಮುಂದಾಗಬೇಕು. ಅದೇ ರೀತಿ ತಮಗೆ ಮಾತು ಕೊಡಬೇಕು. ನಾನೂ ಸಹ ಸ್ವಚ್ಛತೆಗೆ ಒಬ್ಬ ಸಾಮಾನ್ಯ ಕಾರ್ಯಕರ್ತನಂತೆ ಮುಂದಾಗುತ್ತೇನೆ. ಮಹಾತ್ಮಾ ಗಾಂಧೀಜಿ ಕನಸನ್ನು ನಾವೆಲ್ಲಾ ಅನುಷ್ಠಾನಗೊಳಿಸಬೇಕು. ಸ್ವಚ್ಛತೆಗೆ ಅವರು ನೀಡುತ್ತಿದ್ದ ಆದ್ಯತೆ ನಮಗೆಲ್ಲ ಒಂದು ಪಾಠ, ಮಠ ಮಂದಿರಗಳಿಂದ ಭಾರತದ ಸಂಸ್ಕೃತಿ ಅಭಿವೃದ್ಧಿಯಾದರೆ, ವಿದ್ಯಾರ್ಥಿಗಳಿಗೆ ಹೆಚ್ಚು ಜ್ಞಾನ, ಮಾರ್ಗದರ್ಶನ ಸಿಗುತ್ತದೆ ಎಂದರು.

***ಸ್ವಾಮೀಜಿ ಜತೆ ಮೋದಿ ಮಾತು :***

ಶ್ರೀಮಠದ ಆವರಣಕ್ಕೆ ನರೇಂದ್ರ ಮೋದಿ, ರಾಜ್ಯಪಾಲ ವಜುಭಾಯ್ ವಾಲಾ ಅಗಮಿಸಿದ ಕೂಡಲೇ ಸಿದ್ಧಗಂಗಾ ಮಠದ ಅಧ್ಯಕ್ಷರಾದ ಶ್ರೀ ಸಿದ್ಧಲಿಂಗಸ್ವಾಮೀಜಿ ಹೂಮಾಲೆ ಹಾಕಿ ಸ್ವಾಗತಿಸಿದರು. ನಂತರ ಕೇಂದ್ರ ಸಚಿವ ಡಿ.ವಿ. ಸದಾನಂದ ಗೌಡ, ಬಿಜೆಪಿ ರಾಜ್ಯಾಧ್ಯಕ್ಷ ಪ್ರಹ್ಲಾದ ಜೋಷಿ, ಸಂಸದ ಬಿ.ಎಸ್. ಯಡಿಯೂರಪ್ಪ, ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರು, ಮಾಜಿಸಚಿವ ವಿ. ಸೋಮಣ್ಣ, ಮಾಜಿ ಸಂಸದ ಜಿ.ಎಸ್. ಬಸವರಾಜು ಸೇರಿದಂತೆ ಹಲವಾರು ಗಣ್ಯರು ಹೂಗುಚ್ಛಗಳನ್ನು ನೀಡಿ, ಶ್ರೀಮಠಕ್ಕೆ ಬರ ಮಾಡಿಕೊಂಡರು.

ಶ್ರೀಗಳಿಗೆ ಶಾಲು ಹೊದಿಸಿ, ನೆನಪಿನ ಕಾಣಿಕೆ ನೀಡಿ ಆಶೀರ್ವಾದ ಪಡೆದುಕೊಂಡ ಪ್ರಧಾನಿ ನರೇಂದ್ರ ಮೋದಿ ಸ್ವಲ್ಪಹೊತ್ತು ಶ್ರೀಗಳೊಂದಿಗೆ ಸಮಕಾಲೀನ ವಿಷಯಗಳನ್ನು ಚರ್ಚಿಸಿದರು. ನಂತರ ವೇದಿಕೆಗೆ ಆಗಮಿಸಿ ಮಕ್ಕಳನ್ನು ಉದ್ದೇಶಿಸಿ ಮಾತನಾಡಿದರು. ಸುಮಾರು ೨೫ ನಿಮಿಷ ಶ್ರೀಮಠದಲ್ಲಿದ್ದು, ನಂತರ ಇಂಡಿಯಾ ಫುಡ್‌ಪಾರ್ಕ್ ಉದ್ಘಾಟನೆಗೆ ರಕ್ಷಣಾ ಪಡೆಯ ಹೆಲಿಕಾಪ್ಟರ್ ಮೂಲಕ ತೆರಳಿದರು.

*(ಕೃಪೆ : ಸಂಯುಕ್ತ ಕರ್ನಾಟಕ)*

'ಮಹಾತ್ಮ ಗಾಂಧಿ ಎರಡು ಪದಗಳನ್ನು ತುಂಬಾ ಪ್ರೀತಿಸುತ್ತಿದ್ದರು. ಸ್ವಾತಂತ್ರ್ಯ ಮತ್ತು ಸ್ವಚ್ಛತೆ. ಗಾಂಧೀಜಿ ನಮಗೆ ಸ್ವಾತಂತ್ರ್ಯ ತಂದು ಕೊಟ್ಟರು. ನಾವು ಅವರಿಗೆ ಸ್ವಚ್ಛ ಭಾರತದ ಉಡುಗೊರೆ ನೀಡೋಣ'.

– ಶ್ರೀ ನರೇಂದ್ರ ಮೋದಿಯವರು
ಪ್ರಧಾನಮಂತ್ರಿಗಳು

### ಶ್ರೀ ಸಿದ್ಧಗಂಗಾಮಠಕ್ಕೆ ಪ್ರಧಾನಿ ನರೇಂದ್ರ ಮೋದಿ ಭೇಟಿ

## ಮಠ-ಮಂದಿರಗಳಿಂದ ಸಮಾಜದ ಕಲ್ಯಾಣ

ಮಠ-ಮಂದಿರಗಳಿಂದ ಸಮಾಜದ ಕಲ್ಯಾಣವಾಗುತ್ತಿದ್ದು ಸಮಾಜ ನಿರ್ಮಾಣ ಕಾರ್ಯದಲ್ಲಿ ಸಿದ್ಧಗಂಗಾ ಶ್ರೀಗಳ ಕೊಡುಗೆ ಅಪಾರ ಎಂದು ಪ್ರಧಾನಿ ನರೇಂದ್ರ ಮೋದಿ ಮೆಚ್ಚುಗೆ ವ್ಯಕ್ತಪಡಿಸಿದರು.

ಶ್ರೀ ಸಿದ್ಧಗಂಗಾ ಮಠಕ್ಕೆ ಬುಧವಾರ ಭೇಟಿ ನೀಡಿ ಸಿದ್ಧಗಂಗಾಮಠದ ಡಾ. ಶಿವಕುಮಾರ ಸ್ವಾಮೀಜಿ ಅವರ ಆಶೀರ್ವಾದ ಪಡೆದ ನಂತರ ಮಠದ ಆವರಣದಲ್ಲಿ ಏರ್ಪಡಿಸಿದ್ದ ಸರಳ ಸಮಾರಂಭದಲ್ಲಿ ಶ್ರೀಮಠದ ವಿದ್ಯಾರ್ಥಿಗಳು ಹಾಗೂ ಸಿಬ್ಬಂದಿಯನ್ನು ಉದ್ದೇಶಿಸಿ ಅವರು ಮಾತನಾಡಿದರು.

'ನಾನು ಮುಖ್ಯಮಂತ್ರಿಯಾಗಿದ್ದಾಗ ಮಠಕ್ಕೆ ಬರಲು ಸಾಧ್ಯವಾಗಲಿಲ್ಲ. ಪ್ರಧಾನಿಯಾಗಿ ಶ್ರೀಮಠಕ್ಕೆ ಬಂದಿರುವುದು ಸಂತಸ ತಂದಿದೆ. ಶ್ರೀಗಳಂತೆ ನಾವು ಕೂಡ ಸಮಾಜಸೇವೆ ಸಲ್ಲಿಸೋಣ...' ಎಂದು ವಿದ್ಯಾರ್ಥಿಗಳಲ್ಲಿ ಮನವಿ ಮಾಡಿದರು.

'ಸಂಸ್ಕೃತದಲ್ಲಿ ದೇಶದ ಜ್ಞಾನ-ವಿಜ್ಞಾನ ಅಡಕವಾಗಿದ್ದು ಸಂಸ್ಕೃತ ಕಲಿತು ಮುಂದಿನ ಪೀಳಿಗೆಗೆ ಅದನ್ನು ಉಳಿಸಬೇಕಿದೆ. ಶ್ರೀಕ್ಷೇತ್ರದಲ್ಲಿ ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೆ ಸಂಸ್ಕೃತ ಜ್ಞಾನ ನೀಡುತ್ತಿರುವುದು ಮೆಚ್ಚುಗೆಯ ವಿಚಾರ' ಎಂದರು.

**ಸ್ವಚ್ಛತಾ ಆಂದೋಲನದಲ್ಲಿ ಪಾಲ್ಗೊಳ್ಳಲು ಕರೆ :** 'ಗಾಂಧೀಜಿಯವರ ಪ್ರಥಮ ಆದ್ಯತೆ ಸ್ವಚ್ಛತೆಯಾಗಿದ್ದು, ಅವರ ಜನ್ಮದಿನದಂದು ದೇಶದ ಗಲೀಜು ತೊಡೆದು ಹಾಕುವ ಸ್ವಚ್ಛತಾ ಆಂದೋಲನದಲ್ಲಿ ಪ್ರತಿಯೊಬ್ಬ ನಾಗರಿಕರು ಪಾಲ್ಗೊಳ್ಳಬೇಕು' ಎಂದು ಕರೆ ನೀಡಿದರು.

'ನಮ್ಮ ಮನೆಯನ್ನು ಸ್ವಚ್ಛವಾಗಿಡುವ ನಾವು ಸಾರ್ವಜನಿಕ ಪ್ರದೇಶವನ್ನು ಗಲೀಜು ಮಾಡುತ್ತಿದ್ದೇವೆ. ಇದು ಭಾರತ ಮಾತೆಗೆ ನಾವು ಮಾಡುತ್ತಿರುವ ಅವಮಾನ. ನನಗೆ ನಿಮ್ಮ ನೂರು ಗಂಟೆ ಸಮಯ ಬೇಕು. ವರ್ಷದಲ್ಲಿ ನಿಮ್ಮಿಂದ ನೂರು ಗಂಟೆ ಕೊಡಲು ಸಾಧ್ಯವಾ? ವಾರದಲ್ಲಿ ೨ ಗಂಟೆ ನಿಮ್ಮ ಅಮೂಲ್ಯ ಸಮಯವನ್ನು ನಿಮ್ಮ ಬಡಾವಣೆ, ಬೀದಿ, ಗಲ್ಲಿಗಳನ್ನು ಸ್ವಚ್ಛಗೊಳಿಸುವ ಮೂಲಕ ಭಾರತ ಸ್ವಚ್ಛತಾ ಆಂದೋಲನಗಳನ್ನು ಕೈಜೋಡಿಸಬೇಕು' ಎಂದು ಮನವಿ ಮಾಡಿದರು.

**ಎದ್ದು ನಿಂತು ಅಭಿನಂದಿಸಿದ ಮಕ್ಕಳು :** 'ಮಂಗಳಯಾನ ಯಶಸ್ವಿಯಾದ ಈ ದಿನ ಭಾರತವೇ ಹೆಮ್ಮೆ ಪಡುವ ದಿನ. ಮಂಗಳಯಾನ ಯಶಸ್ವಿಗೆ ಶ್ರಮಿಸಿದ ಇಸ್ರೋ ವಿಜ್ಞಾನಿಗಳನ್ನು ನಾವು ಎದ್ದು ನಿಂತು ಅಭಿನಂದಿಸೋಣ' ಎಂದು ಮೋದಿ ಹೇಳಿದಾಗ, ವಿದ್ಯಾರ್ಥಿಗಳು ಎದ್ದು ನಿಂತು ಚಪ್ಪಾಳೆ ತಟ್ಟುವ ಮೂಲಕ ವಿಜ್ಞಾನಿಗಳನ್ನು ಅಭಿನಂದಿಸಿದರು.

ಇದಕ್ಕೂ ಮುನ್ನ ಪ್ರಧಾನಿ ವೇದಿಕೆಗೆ ಆಗಮಿಸಿದಾಗ, ಆವರಣದಲ್ಲಿ ನೆರೆದಿದ್ದ ೮ ಸಾವಿರಕ್ಕೂ ಹೆಚ್ಚು ಸಮವಸ್ತ್ರಧಾರಿ ಶ್ರೀಮಠದ ವಿದ್ಯಾರ್ಥಿಗಳು ಸಾಮೂಹಿಕ ಪ್ರಾರ್ಥನೆ ಸಲ್ಲಿಸಿದರು. ಮೋದಿ ಕೂಡ ಪ್ರಾರ್ಥನೆಯಲ್ಲಿ ಪಾಲ್ಗೊಂಡಿದ್ದರು.

**ಇಂದು ನನಗೆ ಸುದಿನ :** 'ಇಂದು ಸುದಿನ, ಇಸ್ರೋ ವಿಜ್ಞಾನಿಗಳು ಪ್ರಥಮ ಪ್ರಯತ್ನದಲ್ಲೇ ಮಂಗಳಯಾನವನ್ನು ಯಶಸ್ವಿಗೊಳಿಸಿ ದೇಶವೇ ಹೆಮ್ಮೆ ಪಡುವ ಕಾರ್ಯದಲ್ಲಿ ಪಾಲ್ಗೊಂಡಿದ್ದು ಒಂದೆಡೆಯಾದರೆ, ಶತಾಯುಷಿ, ತ್ರಿವಿಧ ದಾಸೋಹಿ ಸಿದ್ಧಗಂಗಾ ಶ್ರೀಗಳ ಆಶೀರ್ವಾದ ಕೂಡ ಇಂದೇ ಸಿಕ್ಕಿರುವುದು ನನಗೆ ಸುದಿನ' ಎಂದರು ಪ್ರಧಾನಿ.

**ಮೋದಿಗಾಗಿ ರಸ್ತೆ ಬದಿ ಕಾದಿದ್ದ ಜನತೆ :** ಬೆಂಗಳೂರಿನಿಂದ ತುಮಕೂರಿಗೆ ಬೆಳಿಗ್ಗೆ ೯.೫೦ರ ವೇಳೆಗೆ ಆಗಮಿಸಿದ ಪ್ರಧಾನಿ ಮೋದಿಗೆ, ತುಮಕೂರು ವಿವಿ ಕಾಲೇಜು ಆವರಣ ದಲ್ಲಿ ನಿರ್ಮಿಸಿದ್ದ ಹೆಲಿಪ್ಯಾಡ್‌ನಲ್ಲಿ ಮೇಯರ್ ಗೀತಾ ರುದ್ರೇಶ್, ಶಾಸಕ ಸುರೇಶ್‌ಗೌಡ ಸೇರಿದಂತೆ ಹಲವು ಮುಖಂಡರಿಂದ ಸ್ವಾಗತ. ನಂತರ ಬಿಎಂಡಬ್ಲ್ಯೂ ಕಾರಿ ನಲ್ಲಿ ಕುಳಿತ ಅವರು, ರಸ್ತೆಯುದ್ದಕ್ಕೂ ನೆರೆದಿದ್ದ ಜನತೆಯತ್ತ ಕೈಬೀಸುತ್ತಾ ಸಾಗಿ ಸಿದ್ಧಗಂಗಾ ಮಠ ತಲುಪಿದರು.

*(ಕೃಪೆ : ಸಂಯುಕ್ತ ಕರ್ನಾಟಕ)*

> 'ಸಂಸ್ಕೃತದಲ್ಲಿ ದೇಶದ ಜ್ಞಾನ-ವಿಜ್ಞಾನ ಅಡಕವಾಗಿದ್ದು ಸಂಸ್ಕೃತ ಕಲಿತು ಮುಂದಿನ ಪೀಳಿಗೆಗೆ ಅದನ್ನು ಉಳಿಸಬೇಕಿದೆ. ಶ್ರೀಕ್ಷೇತ್ರದಲ್ಲಿ ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೆ ಸಂಸ್ಕೃತ ಜ್ಞಾನ ನೀಡುತ್ತಿರುವುದು ಮೆಚ್ಚುಗೆಯ ವಿಚಾರ'.
>
> **– ಶ್ರೀ ನರೇಂದ್ರ ಮೋದಿಯವರು**
> ಪ್ರಧಾನಮಂತ್ರಿಗಳು





## ಸಿದ್ಧಗಂಗೆ ಮಠದಲ್ಲಿ ಭಾವುಕರಾದ ಮೋದಿ

'ಕರ್ನಾಟಕದ ಮೂಲೆಯಲ್ಲಿರುವ ೧೦೭ ವರ್ಷದ ಶಿವಕುಮಾರ ಸ್ವಾಮೀಜಿ ಅವರ ಹೃದಯವು ಕಾಶ್ಮೀರದಲ್ಲಿ ಪ್ರವಾಹದಿಂದ ನೊಂದ ಭಾರತೀಯರ ಕಷ್ಟಕ್ಕೆ ಮಿಡಿಯುತ್ತೆ. ಇಂಥ ಜಾಗಕ್ಕೆ ಬರಲು ಸ್ವಾಮೀಜಿ ಪಾದದ ಹತ್ತಿರ ಕುಳಿತುಕೊಳ್ಳಲು ಅವಕಾಶ ಸಿಕ್ಕಿದ್ದು ನನ್ನ ಭಾಗ್ಯ' ಎಂದು ಪ್ರಧಾನಿ ನರೇಂದ್ರ ಮೋದಿ ಭಾವುಕರಾಗಿ ನುಡಿದರು.

ನಗರದ ಸಿದ್ಧಗಂಗಾ ಮಠದ ಆವರಣದಲ್ಲಿ ಬುಧವಾರ ಮೋದಿ ಬಾಯಿಂದ ಈ ಮಾತು ಹೊರಬಿದ್ದ ತಕ್ಷಣ ವೇದಿಕೆ ಎದುರು ಬಿಳಿ ಪಂಚೆ-ಕೆಂಪು ವಸ್ತ್ರದಲ್ಲಿ ಕುಳಿತಿದ್ದ ೫ ಸಾವಿರ ವಿದ್ಯಾರ್ಥಿಗಳು ಮುಗಿಲಿಗೆ ಕೇಳುವಂತೆ ಹರ್ಷೋದ್ಗಾರ ಮಾಡಿದರು. ಚಪ್ಪಾಳೆ ತಟ್ಟಿ ಸಂಭ್ರಮಿಸಿದರು.

ಮಂಗಳಯಾನ, ಸಂಸ್ಕೃತ ಕಲಿಕೆ, ಮತ್ತು ಶುಚಿತ್ವ ಅಭಿಯಾನ ಎಂಬ ಮೂರು ವಿಷಯದ ಬಗ್ಗೆ ಮಾತನಾಡಲು ಮೋದಿ ಸಿದ್ಧರಾಗಿ ಬಂದಿದ್ದರು. ಮಂಗಳ ಯಾನದ ಯಶಸ್ಸಿಗೆ ಕಾರಣರಾದ ವಿಜ್ಞಾನಿಗಳನ್ನು ಮುಕ್ತ ಕಂಠದಿಂದ ಅಭಿನಂದಿಸಿ, 'ಎಲ್ಲರೂ ಒಂದು ನಿಮಿಷ ಎದ್ದು ನಿಂತು ಚಪ್ಪಾಳೆ ಹೊಡೆಯಿರಿ' ಎಂದು ಹುರಿದುಂಬಿಸಿದರು.

ಮಕ್ಕಳೊಂದಿಗೆ ನೆರೆದಿದ್ದ ಗಣ್ಯರು, ಸನ್ಯಾಸಿಗಳೂ ಎದ್ದು ನಿಂತು ಚಪ್ಪಾಳೆ ಹೊಡೆದು ವಿಜ್ಞಾನಿಗಳಿಗೆ ಗೌರವ ಸೂಚಿಸಿದರು. '೧೦೭ ವರ್ಷದ ಶಿವಕುಮಾರ ಸ್ವಾಮೀಜಿ ಸಹ ಎದ್ದು ನಿಂತಿದ್ದಾರೆ. ನಮಗೆ ಅವರ ಪೂರ್ಣ ಆಶೀರ್ವಾದ ಸಿಕ್ಕಿದೆ' ಎಂದು ಮೋದಿ ಮುಗುಳ್ನಕ್ಕರು.

ಮಠದೊಂದಿಗೆ ತಮ್ಮ ಆತ್ಮೀಯ ಸಂಬಂಧ ಕುರಿತು ಪ್ರಸ್ತಾಪಿಸಿ, 'ಕೆಲ ವರ್ಷದ ಹಿಂದೆ ಇಲ್ಲಿನ ಕೆಲವು ಸ್ವಾಮೀಜಿಗಳು ಗುಜರಾತ್‌ಗೆ ಬಂದು, ನನ್ನನ್ನು ತುಮಕೂರಿಗೆ ಬರಲು ಸ್ವಾಗತಿಸಿದ್ದರು. ಆಗ ಮುಖ್ಯಮಂತ್ರಿಯಾಗಿದ್ದೆ. ಬರಲು ಆಗಲಿಲ್ಲ. ಆದರೆ ಇಂದು ಪ್ರಧಾನಿಯಾಗಿ ಬಂದಿದ್ದೀನಿ. ಬಹುಶಃ ಇದೇ ಸ್ವಾಮೀಜಿ ಇಚ್ಛೆ ಇರಬಹುದು' ಎಂದು ಹೇಳಿದರು.

ಸಂಸ್ಕೃತ ಕಲಿಯಿರಿ: 'ಸಿದ್ಧಗಂಗಾಮಠದಲ್ಲಿ ವಿಜ್ಞಾನದ ಅಭ್ಯಾಸದೊಂದಿಗೆ ಸಂಸ್ಕೃತದ ಕಲಿಕೆಯೂ ಸಾಗಿದೆ. ಜಗತ್ತಿನ ಎಲ್ಲ ಮಾನವರ ಹಿತಕ್ಕೆ ಪೂರಕವಾದ ಸಾಹಿತ್ಯ ಶಾಸ್ತ್ರ ಗ್ರಂಥಗಳಲ್ಲಿದೆ. ಅದು ಬಹುಪಾಲು ಸಂಸ್ಕೃತದಲ್ಲಿದೆ. ಮುಂದಿನ ತಲೆಮಾರಿಗೆ ನಮ್ಮ ಸಂಸ್ಕೃತಿಯನ್ನು ದಾಟಿಸಲು ಸಂಸ್ಕೃತ ಕಲಿಯುವುದೊಂದೇ ಮಾರ್ಗ' ಎಂದು ಮೋದಿ ಅಭಿಪ್ರಾಯಪಟ್ಟರು.

'ಸಾಧುಗಳು ಈ ದೇಶಕ್ಕಾಗಿ ಏನನ್ನೂ ಮಾಡುತ್ತಿಲ್ಲ. ಜನ ಬಂದು ತಮ್ಮ ಕಾಲಿಗೆ ಬಿದ್ದು ದುಡ್ಡು ಕೊಟ್ಟು ಹೋಗುತ್ತಾರೆ. ಸನ್ಯಾಸಿಗಳು ಆರಾಮವಾಗಿ ಕಾಲ ಕಳೆಯುತ್ತಾರೆ ಎಂದು ಕೆಲವರು ಹೇಳುತ್ತಾರೆ. ನಾನು ಇದನ್ನು ಒಪ್ಪುವುದಿಲ್ಲ. ನನಗೆ ಸಾಧುಗಳ ಬಗ್ಗೆ ಗೌರವವಿದೆ. ನಮ್ಮ ಬದುಕಿನ ದಾರಿ, ಉದ್ದೇಶ ಮತ್ತು ಪ್ರೇರಣೆಯನ್ನು ಕೊಟ್ಟವರು ಸಂತರು. ಜನರ ಸೇವೆಯೇ ದೇವರ ಸೇವೆ ಎಂಬ ಆಶಯಕ್ಕೆ ತಕ್ಕಂತೆ ಸಂತರು ನಡೆದುಕೊಳ್ಳುತ್ತಿದ್ದಾರೆ' ಎಂದು ಶಿವಕುಮಾರ ಸ್ವಾಮೀಜಿ ಅವರತ್ತ ಅರ್ಥಪೂರ್ಣವಾಗಿ ನೋಡಿದರು.

**ಗಾಂಧಿ ಕನಸಿನ ಭಾರತ :** 'ಮಹಾತ್ಮಾ ಗಾಂಧಿ ಎರಡು ಪದಗಳನ್ನು ತುಂಬಾ ಪ್ರೀತಿಸುತ್ತಿದ್ದರು. ಸ್ವಾತಂತ್ರ್ಯ ಮತ್ತು ಸ್ವಚ್ಛತೆ. ಗಾಂಧೀಜಿ ನಮಗೆ ಸ್ವಾತಂತ್ರ್ಯ ತಂದುಕೊಟ್ಟರು. ನಾವು ಅವರಿಗೆ ಸ್ವಚ್ಛ ಭಾರತದ ಉಡುಗೊರೆ ನೀಡೋಣ. ಜನತೆ ಸ್ವಚ್ಛತೆಯ ಪಣ ತೊಟ್ಟರೆ, ವಾರಕ್ಕೆ ೨ ಗಂಟೆ ಸ್ವಚ್ಛತಾ ಕಾರ್ಯ ನಡೆಸಲು ಸಮಯ ಮೀಸಲಿಟ್ಟರೆ ದೇಶ ಸುಂದರವಾಗುತ್ತದೆ. ಒಂದು ವರ್ಷದಲ್ಲಿ ದೇಶ ಸುಂದರವಾಗುತ್ತದೆ. ಒಂದು ವರ್ಷದಲ್ಲಿ ನಿಮ್ಮ ೧೦೦ ಗಂಟೆ ಸಮಯವನ್ನು ನನಗೆ ಭಿಕ್ಷೆ ನೀಡಿ, ಸ್ವಚ್ಛಗೊಳಿಸುವ ಕೆಲಸ ಮಾಡಿ' ಎಂದು ವಿನಂತಿಸಿದರು.

ರಾಜ್ಯಪಾಲ ವಜುಭಾಯಿ ವಾಲಾ, ಮಠದ ಅಧ್ಯಕ್ಷ ಶ್ರೀ ಸಿದ್ಧಲಿಂಗಸ್ವಾಮೀಜಿ ಇದ್ದರು. ಮಾಜಿ ಮುಖ್ಯಮಂತ್ರಿಗಳಾದ ಬಿ.ಎಸ್. ಯಡಿಯೂರಪ್ಪ, ಜಗದೀಶ್ ಶೆಟ್ಟರ್, ರೈಲ್ವೆ ಸಚಿವ ಡಿ.ವಿ.ಸದಾನಂದಗೌಡ, ಮಾಜಿ ಸಚಿವರಾದ ವಿ. ಸೋಮಣ್ಣ, ಎಸ್. ಶಿವಣ್ಣ, ಮಾಜಿ ಸಂಸದ ಜಿ.ಎಸ್. ಬಸವರಾಜ್, ಬಿಜೆಪಿ ರಾಜ್ಯ ಘಟಕದ ಅಧ್ಯಕ್ಷ ಪ್ರಹ್ಲಾದ ಜೋಷಿ, ಮುಖಂಡರಾದ ಶಿವಪ್ರಸಾದ್, ಜ್ಯೋತಿಗಣೇಶ್ ಉಪಸ್ಥಿತರಿದ್ದರು.

**ಸ್ವಾಮೀಜಿಗೆ ನೆರವು :** ಶಿವಕುಮಾರ ಸ್ವಾಮೀಜಿ ಅವರು ಭಾಷಣ ಮಾಡುವ ಸಂದರ್ಭ ಪ್ರಧಾನಿ ನರೇಂದ್ರ ಮೋದಿ

ವಿನೀತ ಭಕ್ತರಂತೆ ಮೈಕ್ ಹಿಡಿದು ಸಹಕರಿಸಿದರು. ಸ್ವಾಮೀಜಿ ಭಾಷಣ ಮುಗಿದು ಎದ್ದು ನಿಲ್ಲುವ ಸಂದರ್ಭ, ತಾವೇ ಮೊದಲು ಮೇಲೆದ್ದು ಸ್ವಾಮೀಜಿ ಕೈಹಿಡಿದು ಎಬ್ಬಿಸಲು ಯತ್ನಿಸಿದರು. ಎಸ್‌ಐಟಿ ನಿರ್ದೇಶಕ ಡಾ. ಎಂ.ಎನ್. ಚನ್ನಬಸಪ್ಪ ಸ್ವಾಗತ ಭಾಷಣ ಮಾಡುತ್ತಿದ್ದಾಗ ತಮ್ಮ ಕೈಗಡಿಯಾರವನ್ನು ಸ್ವಾಮೀಜಿ ಮುಂದೆ ಇಟ್ಟು, ವೇಳೆಯಾಗುತ್ತಿದೆ ಎಂಬಂತೆ ರಾಜ್ಯಪಾಲರಿಗೆ ಕಣ್ಸನ್ನೆ ಮಾಡಿದರು.

**ಭಾಷಣ ಮೊಟಕು** : ಸಿದ್ಧಗಂಗಾ ಮಠದಲ್ಲಿ ನಡೆದ ಕಾರ್ಯಕ್ರಮದಲ್ಲಿ ಮಾತನಾಡಲೆಂದು ಡಾ. ಶಿವಕುಮಾರ ಸ್ವಾಮೀಜಿ ಭಾಷಣ ಸಿದ್ಧಪಡಿಸಿಕೊಂಡಿದ್ದರು. ಆದರೆ ಅದನ್ನು ಪೂರ್ಣವಾಗಿ ಓದಲು ಅವಕಾಶ ಸಿಗಲಿಲ್ಲ. 'ತಮ್ಮ ಬಿಡುವಿಲ್ಲದ ಕಾರ್ಯಕ್ರಮಗಳ ನಡುವೆಯೂ ಪ್ರಧಾನಿ ಅವರು ನಮ್ಮ ಮಠಕ್ಕೆ ಬಂದು ಗುರುಕುಲದ ಮಕ್ಕಳಿಗೆ ಹಿತವಚನ ಹೇಳಿದ್ದಾರೆ. ಅವರ ಹೃದಯವಂತಿಕೆಗೆ ನಮ್ಮ ಧನ್ಯವಾದಗಳು' ಎಂದಷ್ಟೇ ಹೇಳಿ ಭಾಷಣ ಮುಗಿಸಿದರು.

**ಮೋದಿ ಬಂದ್ರು, ಮೋದಿ ಬಂದ್ರು** : ಮುಂಜಾನೆ ೮ ಗಂಟೆ ಯಿಂದಲೇ ಮಠದ ಆವರಣದಲ್ಲಿ ಮಕ್ಕಳನ್ನು ಪೆಂಡಾಲ್ ಕೆಳಗೆ ಕೂಡಿಸುವ ಸಾಹಸಕ್ಕೆ ಶಿಕ್ಷಕರು ಕೈಹಾಕಿದ್ದರು. ತಡವಾಗಿ ಬಂದ ವಿದ್ಯಾರ್ಥಿಗಳನ್ನು ಮುಂದೆ ಬಿಡಲು ಪೊಲೀಸರು ಮೀನಾಮೇಷ ಎಣಿಸುತ್ತಿದ್ದರು. 'ನಮ್‌ಮೇಷ್ಟ್ರು ಅಲ್ಲವರೆ ನೋಡಿಸಾ' ಎಂದು ಮಕ್ಕಳನ್ನು ಪೊಲೀಸಪ್ಪರನ್ನು ಗೋಗರೆಯುತ್ತಿದ್ದರು.

ಸರಿಯಾಗಿ ೯.೪೧ಕ್ಕೆ ಮಠದ ಬಾನಿನಲ್ಲಿ ೪ ಹೆಲಿಕಾಪ್ಟರ್‌ಗಳು ಹಾರಿ ಬಂದವು. 'ಮೋದಿ ಬಂದ್ರು-ಮೋದಿ ಬಂದ್ರು...' ಎಂದು ಮಕ್ಕಳು ತಲೆ ಮೇಲೆತ್ತಿ ಟಾಟಾ ಮಾಡಿದರು. ೧೦ ಗಂಟೆಗೆ ಮಠದ ಆವರಣದಲ್ಲಿ ವಿಐಪಿ ಕಾರಿನ ಸದ್ದು ಕೇಳಿಸಿತು. ಬುಲೆಟ್‌ಪ್ರೂಫ್ ಬಿಎಂಡಬ್ಲ್ಯು ಕಾರಿನಲ್ಲಿ ಬಂದ ಪ್ರಧಾನಿಯನ್ನು ಬಿಜೆಪಿ ಮುಖಂಡರು ಸ್ವಾಗತಿಸಿದರು.

೧೦ ನಿಮಿಷ ಶಿವಕುಮಾರಸ್ವಾಮಿಜಿ ಅವರ ಕೋಣೆಯಲ್ಲಿ ಖಾಸಗಿಯಾಗಿ ಮಾತನಾಡಿದ ಮೋದಿ, ೧೦.೧೦ಕ್ಕೆ ರಾಜ್ಯಪಾಲ ವಜೂಭಾಯಿ ವಾಲಾ ಅವರೊಂದಿಗೆ ವೇದಿಕೆಯತ್ತ ಧಾವಿಸಿದರು. ೧೫ ನಿಮಿಷ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಭಾಷಣ ಮಾಡಿದರು. ಸರಿಯಾಗಿ ೧೦.೩೫ಕ್ಕೆ ವೇದಿಕೆ ಇಳಿದು ಕಾರಿನತ್ತ ತೆರಳಿದರು.

*(ಕೃಪೆ : ಪ್ರಜಾವಾಣಿ)*

## ಸಿದ್ಧಗಂಗಾಮಠಕ್ಕೆ ಮೋದಿ
### ಕಾಲಿಗೆರಗಿ ಶಿವಕುಮಾರಶ್ರೀಗಳ ಆಶೀರ್ವಾದ ಕೋರಿಕೆ

ದೇಶದ ಮೊದಲ ಬೃಹತ್ ಫುಡ್ ಪಾರ್ಕ್ ಉದ್ಘಾಟನೆಗಾಗಿ ಬುಧವಾರ ತುಮಕೂರಿಗೆ ಆಗಮಿಸಿದ ಪ್ರಧಾನಿ ನರೇಂದ್ರ ಮೋದಿ, ಫುಡ್‌ಪಾರ್ಕ್ ಉದ್ಘಾಟನೆಗೂ ಮುನ್ನ ಸಿದ್ಧಗಂಗಾ ಮಠಾಧೀಶ ಶಿವಕುಮಾರ ಶ್ರೀಗಳ ಆಶೀರ್ವಾದ ಪಡೆದರು.

ಬೆಂಗಳೂರಿನಿಂದ ಬೆಳಿಗ್ಗೆ ೯.೩೫ಕ್ಕೆ ತುಮಕೂರು ವಿವಿ ಹೆಲಿಪ್ಯಾಡ್‌ಗೆ ಆಗಮಿಸಿದ ಮೋದಿ, ಅಲ್ಲಿಂದ ಕಾರಿನಲ್ಲಿ ಮಠಕ್ಕೆ ತೆರಳಿದರು. ಶ್ರೀಗಳ ಕಾಲುಮುಟ್ಟಿ ನಮಸ್ಕರಿಸಿ, ಅವರ ಆಶೀರ್ವಾದ ಪಡೆದರು. ಶ್ರೀಗಳು ಮಠದಿಂದ ಮೋದಿಯನ್ನು ಗೌರವಿಸಿ ಆಶೀರ್ವದಿಸಿದರು. ಬಳಿಕ, ಶ್ರೀಗಳ ಜತೆ ಮೋದಿ ಕೆಲಹೊತ್ತು ಸಮಾಲೋಚನೆ ನಡೆಸಿದರು. ನಂತರ ಮಠದ ಆವರಣದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಮಕ್ಕಳನ್ನು ಉದ್ದೇಶಿಸಿ ಮಾತನಾಡಿ, ಸಮಾಜ ಸುಧಾರಣೆಗೆ ಸಿದ್ಧಗಂಗಾ ಶ್ರೀಗಳು ನೀಡಿರುವ ಕೊಡುಗೆಯನ್ನು ಶ್ಲಾಘಿಸಿದರು. ಶತಾಯುಷಿ ದಾಸೋಹಿ ಸಿದ್ಧಗಂಗಾ ಶ್ರೀಗಳ ಆಶೀರ್ವಾದ ಸಿಕ್ಕಿರುವ ಈ ದಿನ ನಮ್ಮ ಸುದಿನ ಎಂದರು. ಶ್ರೀಗಳಂತೆ ನಾವೂ ಕೂಡ ಸಮಾಜ ಸೇವೆ ಸಲ್ಲಿಸೋಣ ಎಂದು ಮಕ್ಕಳಿಗೆ ಕರೆ ನೀಡಿದರು. ನಂತರ, ಮಂಗಳಯಾನ ಯಶಸ್ಸಿಗೆ ಶ್ರಮಿಸಿದ ಇಸ್ರೋ ವಿಜ್ಞಾನಿಗಳನ್ನು ಎದ್ದು ನಿಂತು ಅಭಿನಂದಿಸೋಣ ಎಂದಾಗ ವಿದ್ಯಾರ್ಥಿಗಳು ಎದ್ದು ನಿಂತು ಚಪ್ಪಾಳೆ ತಟ್ಟುವ ಮೂಲಕ ವಿಜ್ಞಾನಿಗಳನ್ನು ಅಭಿನಂದಿಸಿದರು.

***ಕಾಶ್ಮೀರಿ ಸಂತ್ರಸ್ತರಿಗೆ ಶ್ರೀಗಳಿಂದ ೨೫ ಲಕ್ಷ ದೇಣಿಗೆ :***

ಜಮ್ಮು-ಕಾಶ್ಮೀರ ಪ್ರವಾಹದಿಂದ ಸಂತ್ರಸ್ತರಾದವರಿಗೆ ಸಿದ್ಧಗಂಗಾ ಶಿಕ್ಷಣ ಸಂಸ್ಥೆ ವತಿಯಿಂದ ೨೫ ಲಕ್ಷ ರೂ.ಗಳ ದೇಣಿಗೆಯ ಚೆಕ್‌ನ್ನು ಪ್ರಧಾನಿಗೆ ಶ್ರೀಗಳು ಸಮರ್ಪಿಸಿದರು. ರಾಜ್ಯಪಾಲ ವಜುಭಾಯಿವಾಲಾ, ಕೇಂದ್ರ ಸಚಿವರಾದ





ಸದಾನಂದಗೌಡ, ಅನಂತಕುಮಾರ್, ಬಿಜೆಪಿ ರಾಜ್ಯಾಧ್ಯಕ್ಷ ಪ್ರಹ್ಲಾದ ಜೋಶಿ, ಮಾಜಿ ಸಿಎಂ. ಯಡಿಯೂರಪ್ಪ, ವಿ. ಸೋಮಣ್ಣ ಜತೆಗಿದ್ದರು.

***ನನಗೆ ನಿಮ್ಮ ೧೦೦ ಗಂಟೆ ಕೊಡಿ!***

ವರ್ಷದಲ್ಲಿ ನಿಮ್ಮಿಂದ ನೂರುಗಂಟೆ ತನಗೆ ಕೊಡಲು ಸಾಧ್ಯವಾ. ವಾರದಲ್ಲಿ ೨ ಗಂಟೆ ಅಮೂಲ್ಯ ಸಮಯವನ್ನು ನಿಮ್ಮ ಬಡಾವಣೆ, ಬೀದಿ, ಗಲ್ಲಿಗಳನ್ನು ಸ್ವಚ್ಛಗೊಳಿಸುವ ಮೂಲಕ 'ಭಾರತ ಸ್ವಚ್ಛತಾ ಆಂದೋಲನಕ್ಕೆ' ಕೈಜೋಡಿಸಬೇಕೆಂದು ಪ್ರಧಾನಿ ನರೇಂದ್ರಮೋದಿ ಮನವಿ ಮಾಡಿದರು.

ಸಿದ್ಧಗಂಗಾ ಶ್ರೀಗಳ ಆಶೀರ್ವಾದ ಪಡೆದ ನಂತರ ಮಠದ ಆವರಣದಲ್ಲಿ ಏರ್ಪಡಿಸಿದ್ದ ಸರಳ ಸಮಾರಂಭದಲ್ಲಿ ಶ್ರೀಮಠದ ವಿದ್ಯಾರ್ಥಿಗಳು, ಸಿಬ್ಬಂದಿಯನ್ನುದ್ದೇಶಿಸಿ ಮಾತನಾಡಿದರು. ಗಾಂಧೀಜಿಯವರ ಪ್ರಥಮ ಆದ್ಯತೆ ಸ್ವಚ್ಛತೆಯಾಗಿದ್ದು, ಅವರ ಜನ್ಮದಿನದಂದು ದೇಶದ ಗಲೀಜು ತೊಡೆದು ಹಾಕುವ ಸ್ವಚ್ಛತ ಆಂದೋಲನದಲ್ಲಿ ಪ್ರತಿಯೊಬ್ಬ ನಾಗರಿಕರು ಪಾಲ್ಗೊಳ್ಳಬೇಕೆಂದರು.

**ಸಮಾಲೋಚನೆ** : ಹೆಲಿಪ್ಯಾಡ್‌ಗೆ ಬಂದಿಳಿದ ಮೋದಿ ನರೇಂದ್ರ ಮೋದಿ, ಕಾರಿನಲ್ಲಿ ಮಠಕ್ಕೆ ಆಗಮಿಸಿದರು. ಮಠದಲ್ಲಿ ಮಕ್ಕಳು, ಮಠದ ಆಡಳಿತ ಮಂಡಳಿ ಪ್ರಧಾನಿಯವರನ್ನು ಸ್ವಾಗತಿಸಿದರು. ನಂತರ ಪ್ರಧಾನಿಗಳು ಹಿರಿಯ ಶ್ರೀಗಳಾದ ಕರ್ನಾಟಕ ರತ್ನ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಪಾದಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆದರು. ಬಳಿಕ ನರೇಂದ್ರ ಮೋದಿ ಸ್ವಾಮೀಜಿಗಳೊಂದಿಗೆ ಕೆಲಹೊತ್ತು ಸಮಾಲೋಚನೆ ನಡೆಸಿದರು.

ಈ ವೇಳೆ ರಾಜ್ಯಪಾಲ ವಾಜುಭಾಯಿವಾಲಾ, ಕೇಂದ್ರ ಸಚಿವರಾದ ಸದಾನಂದಗೌಡ, ಅನಂತ್‌ಕುಮಾರ್, ಬಿಜೆಪಿ ರಾಜ್ಯಾಧ್ಯಕ್ಷ ಪ್ರಹ್ಲಾದ್‌ಜೋಶಿ, ಮಾಜಿ ಮುಖ್ಯಮಂತ್ರಿಗಳಾದ ಯಡಿಯೂರಪ್ಪ, ಜಗದೀಶ್‌ಶೆಟ್ಟರ್, ಮಾಜಿ ಸಚಿವರಾದ ವಿ. ಸೋಮಣ್ಣ, ಎಸ್. ಶಿವಣ್ಣ, ಮಾಜಿ ಸಂಸದ ಜಿ.ಎಸ್. ಬಸವರಾಜು, ಮುಖಂಡರಾದ ಜ್ಯೋತಿ ಗಣೇಶ್, ಎಂ.ಬಿ. ನಂದೀಶ್, ಶಿವಪ್ರಸಾದ್, ಸಿ.ವಿ. ಮಹದೇವಯ್ಯ ಮತ್ತಿತರರಿದ್ದರು.

**ಮಾಧ್ಯಮದವರಿಗೂ ನಿರ್ಬಂಧ** : ಸಿದ್ಧಗಂಗಾಮಠಕ್ಕೆ ಮೋದಿ ಭೇಟಿ ಹಿನ್ನಲೆಯಲ್ಲಿ ಬಿಗಿಯಾದ ಪೊಲೀಸ್ ಭದ್ರತೆ ಏರ್ಪಡಿಸಲಾಗಿತ್ತು. ಮಠದ ವಿದ್ಯಾರ್ಥಿಗಳು ಹಾಗೂ ಸಿಬ್ಬಂದಿ ಹೊರತುಪಡಿಸಿ ಮಾಧ್ಯಮದವರ ಪ್ರವೇಶಕ್ಕೂ ನಿರ್ಬಂಧ ವಿಧಿಸಲಾಗಿತ್ತು.

*(ಕೃಪೆ : ಉದಯವಾಣಿ)*

## ಸಿದ್ಧಗಂಗಾಶ್ರೀಗಳ ಆಶೀರ್ವಾದ ಪಡೆದ ಮೋದಿ
### ನೆರೆಸಂತ್ರಸ್ತರಿಗಾಗಿ ಮಠದಿಂದ ೨೫ ಲಕ್ಷ ರೂಗಳ ಚೆಕ್ ವಿತರಣೆ

ದೇಶಕ್ಕೆ ಸಾಧು-ಸಂತರು ಯಾವುದೇ ಕೊಡುಗೆ ನೀಡಿಲ್ಲ ಎಂಬ ಆರೋಪವಿದೆ. ಆದರೆ ನಮ್ಮ ದೇಶ ನಿರ್ಮಾಣವಾಗಲು ಸಾಧು-ಸಂತರ ಕೊಡುಗೆ ಅಪಾರ ಎಂದು ಪ್ರಧಾನ ಮಂತ್ರಿ ನರೇಂದ್ರಮೋದಿ ಅವರು ಅಭಿಪ್ರಾಯ ವ್ಯಕ್ತಪಡಿಸಿದರು.

ನಗರದ ಸಿದ್ಧಗಂಗಾಮಠಕ್ಕೆ ಭೇಟಿ ನೀಡಿ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಆಶೀರ್ವಾದ ಪಡೆದ ಬಳಿಕ ಮಠದ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದ ಅವರು, ತಾವು ಗುಜರಾತ್ ಸಿಎಂ ಆಗಿದ್ದ ಸಂದರ್ಭದಲ್ಲಿ ಕರ್ನಾಟಕಕ್ಕೆ ಬಂದಾಗ ತುಮಕೂರಿನ ಶ್ರೀ ಸಿದ್ಧಗಂಗಾ ಮಠಕ್ಕೆ ಭೇಟಿ ನೀಡಬೇಕೆಂಬ ಮಹದಾಸೆಯನ್ನು ಹೊಂದಿದ್ದೆವು. ಶ್ರೀಗಳೂ ಸಹ ಮಠಕ್ಕೆ ಆಗಮಿಸುವಂತೆ ಆಹ್ವಾನ ನೀಡಿದ್ದರು. ಆದರೆ ತಾವು ಪ್ರಧಾನಿಯಾಗಿಯೇ ಶ್ರೀಮಠಕ್ಕೆ ಬರಬೇಕೆಂಬ ಶ್ರೀಗಳ ಆಶೀರ್ವಾದ ತಮ್ಮ ಮೇಲೆ ಇದ್ದ ಕಾರಣ ಇದೀಗ ತಾವು ಪ್ರಧಾನ ಮಂತ್ರಿಯಾಗಿ ಶ್ರೀಗಳ ಚರಣಕ್ಕೆ ನಮಸ್ಕರಿಸುವ ಸೌಭಾಗ್ಯ ತಮ್ಮದಾಗಿರುವುದು ಸಂತಸದ ಸಂಗತಿ ಎಂದವರು ಹರ್ಷ ವ್ಯಕ್ತಪಡಿಸಿದರು.

ಶ್ರೀಮಠವು ಹಲವು ದಶಕಗಳಿಂದ ಲಕ್ಷಾಂತರ ವಿದ್ಯಾರ್ಥಿಗಳಿಗೆ ಅನ್ನದಾನ, ವಿದ್ಯಾದಾನ ಮಾಡುತ್ತಾ ಬಂದಿದೆ. ಹಾಗಾಗಿ ಇಂದು ಶ್ರೀಮಠದಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿಯೊಬ್ಬ ವಿದ್ಯಾರ್ಥಿಯೂ ಮುಂದಿನ ದಿನಗಳಲ್ಲಿ ಭಾರತಕ್ಕೆ ವಿಶೇಷ ಕೊಡುಗೆ ನೀಡುವ ಮೂಲಕ ದೇಶದ ಅಭಿವೃದ್ಧಿಗೆ ಶ್ರಮಿಸುವಂತೆ ಕರೆ ನೀಡಿದ ಅವರು, ಉತ್ತಮ ಹಾಗೂ ಪ್ರಬಲ ದೇಶವನ್ನು ನಿರ್ಮಿಸಲು ನಿಮ್ಮೆಲ್ಲರ ಸಹಾಯ ಅಗತ್ಯ ಎಂದು ತಿಳಿಸಿದರು. ಇಂದು ಇಸ್ರೋ ವಿಜ್ಞಾನಿಗಳು ಮಂಗಳಗ್ರಹದ ಕಕ್ಷಗೆ ಮಾರ್ಸ್ ನೌಕೆಯನ್ನು ತಲುಪಿಸುವಲ್ಲಿ ಯಶಸ್ವಿಯಾಗಿದ್ದಾರೆ. ಇಂತಹ ಮಹಾನ್ ಸುದಿನಕ್ಕೆ ಕಾರಣವಾದ

ವಿಜ್ಞಾನಿಗಳನ್ನು ಹೃದಯ ತುಂಬಿ ಅಭಿನಂದಿಸಿದ ಮೋದಿ ಅವರು, ಪ್ರಪಂಚದಲ್ಲಿಯೇ ಮೊದಲ ಪ್ರಯತ್ನದಲ್ಲೇ ಮಂಗಳ ಗ್ರಹ ವನ್ನು ತಲುಪುವಲ್ಲಿ ಯಶಸ್ವಿಯಾದ ದೇಶ ಎಂಬ ಹೆಗ್ಗಳಿಕೆಗೆ ಇದೀಗ ಭಾರತ ಪಾತ್ರವಾಗಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಇದೇ ವೇಳೆ ಸಿದ್ಧಗಂಗಾಮಠದ ಹಿರಿಯ ಶ್ರೀಗಳಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಜಮ್ಮು-ಕಾಶ್ಮೀರದ ನೆರೆಸಂತ್ರಸ್ತರ ಪರಿಹಾರ ನಿಧಿಗೆ ೨೫ ಲಕ್ಷ ರೂಗಳ ದೇಣಿಗೆಯನ್ನು ಚೆಕ್ ರೂಪದಲ್ಲಿ ಪ್ರಧಾನಿ ನರೇಂದ್ರ ಮೋದಿ ಅವರಿಗೆ ನೀಡಿದರು. ವೇದಿಕೆಯಲ್ಲಿ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು, ರಾಜ್ಯಪಾಲ ವಜೂಭಾಯಿ ವಾಲಾ, ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮೀಜಿ, ಡಾ. ಎಂ.ಎನ್. ಚನ್ನಬಸಪ್ಪ ಉಪಸ್ಥಿತರಿದ್ದರು. ಪ್ರಧಾನಿ ನರೇಂದ್ರಮೋದಿ ಅವರು ಶ್ರೀಮಠಕ್ಕೆ ಆಗಮಿಸುವ ಹಿನ್ನಲೆಯಲ್ಲಿ ಬೆಳಿಗ್ಗೆಯೇ ಮಠದ ಸಾವಿರಾರು ವಿದ್ಯಾರ್ಥಿಗಳು ಶ್ರೀಮಠದ ಸಮವಸ್ತ್ರ ತೊಟ್ಟು ಶಾಂತರೀತಿಯಲ್ಲಿ ಆಸೀನರಾಗಿದ್ದರು. ಪ್ರಧಾನಿ ನರೇಂದ್ರಮೋದಿಯವರು ಬೆಳಿಗ್ಗೆ ೧೦.೦೫ಕ್ಕೆ ಶ್ರೀಮಠಕ್ಕೆ ಆಗಮಿಸುತ್ತಿದ್ದಂತೆ ಮಾಜಿ ಸಿಎಂಗಳಾದ ಬಿ.ಎಸ್. ಯಡಿಯೂರಪ್ಪ, ಜಗದೀಶ್ ಶೆಟ್ಟರ್, ಕೇಂದ್ರ ರೈಲ್ವೆ ಸಚಿವ ಸದಾನಂದಗೌಡ, ರಸ ಗೊಬ್ಬರ ಖಾತೆ ಸಚಿವ ಅನಂತಕುಮಾರ್, ಮಾಜಿಸಂಸದ ಜಿ.ಎಸ್. ಬಸವರಾಜು, ಮಾಜಿ ಸಚಿವ ವಿ.ಸೋಮಣ್ಣ ಸೇರಿದಂತೆ ಬಿಜೆಪಿ ಹಿರಿಯ ಮುಖಂಡರು ಮೋದಿ ಅವರಿಗೆ ಹೂಗುಚ್ಛ ನೀಡುವ ಮೂಲಕ ಸ್ವಾಗತ ಕೋರಿದರು. ಪ್ರಧಾನಿ ಆಗಮನ ಹಿನ್ನಲೆ ಶ್ರೀಮಠದ ಸುತ್ತಮುತ್ತ ಬಿಗಿ ಪೊಲೀಸ್ ಬಂದೋಬಸ್ತ್ ಏರ್ಪಡಿಸ ಲಾಗಿತ್ತು. ಸುತ್ತಮುತ್ತಲ ಅಂಗಡಿ-ಮುಂಗಟ್ಟುಗಳನ್ನು ಮುಚ್ಚಿಸಲಾಗಿತ್ತು. ಅಲ್ಲದೆ ವಾಹನ ಸಂಚಾರಕ್ಕೆ ನಿರ್ಬಂಧ ಹೇರಲಾಗಿತ್ತು.

*(ಕೃಪೆ : ಪ್ರಜಾಪ್ರಗತಿ)*

## ಮಠ ಮಂದಿರಗಳಿಂದ ಸಮಾಜದ ಅಭಿವೃದ್ಧಿ : ಪ್ರಧಾನಿ ಮೋದಿ

### ತುಮಕೂರು : ಸಿದ್ಧಗಂಗಾಮಠಕ್ಕೆ ಪ್ರಧಾನಿ ಭೇಟಿ

**ಸಾ**ಧುಸಂತರು ದೇಶಕ್ಕೆ ಏನೂ ಮಾಡಿಲ್ಲವೆಂಬ ಮಾತಿದೆ. ಆದರೆ ಮಠ, ಮಂದಿರಗಳಿಂದ ಸಮಾಜದ ಕಲ್ಯಾಣವಾಗುತ್ತಿದೆ. ಸಮಾಜ ನಿರ್ಮಾಣದಲ್ಲಿ ಸಿದ್ಧಗಂಗಾ ಶ್ರೀಗಳ ಕೊಡುಗೆ ಅಪಾರ ಎಂದು ಪ್ರಧಾನ ಮಂತ್ರಿ ನರೇಂದ್ರ ಮೋದಿ ಹೇಳಿದ್ದಾರೆ. ತುಮಕೂರಿನ ಸಿದ್ಧಗಂಗಾಮಠಕ್ಕೆ ಬುಧವಾರ ಭೇಟಿ ನೀಡಿ ಸಿದ್ಧಗಂಗಾ ಶ್ರೀಗಳ ಆಶೀರ್ವಾದ ಪಡೆದ ನಂತರ ಮಠದ ಆವರಣದಲ್ಲಿ ಏರ್ಪಡಿಸಿದ್ದ ಸರಳ ಸಮಾರಂಭದಲ್ಲಿ ಅವರು ಮಾತನಾಡಿದರು.

ಭಾರತದ ವಿಜ್ಞಾನಿಗಳು ಪ್ರಥಮ ಪ್ರಯತ್ನದಲ್ಲೇ ಮಂಗಳಯಾನವನ್ನು ಯಶಸ್ವಿಗೆ ತಲುಪಿಸಿದ ಮೊದಲ ದೇಶವಾಗಿದೆ. ದೇಶವೇ ಹೆಮ್ಮೆಪಡುವ ಕಾರ್ಯದಲ್ಲಿ ಪಾಲ್ಗೊಂಡಿದ್ದು ಒಂದೆಡೆಯಾದರೆ, ಶತಾಯುಷಿ ಸಿದ್ಧಗಂಗಾ ಶ್ರೀಗಳ ಆಶೀರ್ವಾದ ಕೂಡಾ ಇಂದು ಸಿಕ್ಕಿರುವುದು ನನಗೆ ಸುದಿನ ಎಂದರು.

**ಕಾಶ್ಮೀರ ಸಂತ್ರಸ್ತರಿಗೆ ೨೫ ಲಕ್ಷ ರೂ ದೇಣಿಗೆ :** ಜಮ್ಮು ಕಾಶ್ಮೀರದ ಪ್ರವಾಹ ಸಂತ್ರಸ್ತರಿಗೆ ಸಿದ್ಧಗಂಗಾ ಶಿಕ್ಷಣ ಸಂಸ್ಥೆ ನೆರವಿನ ಹಸ್ತ ನೀಡಿದ್ದು, ಸಂಸ್ಥೆಯಿಂದ ಸಂಗ್ರಹಿಸಿದ ೨೫ ಲಕ್ಷ ರೂ. ದೇಣಿಗೆಯ ಚೆಕ್‌ನ್ನು ಪ್ರಧಾನಮಂತ್ರಿ ನರೇಂದ್ರ ಮೋದಿ ಅವರಿಗೆ ಸಮಾರಂಭದಲ್ಲಿ ಸಿದ್ಧಗಂಗಾ ಶ್ರೀಗಳು ಅರ್ಪಿಸಿದರು.

**ದೇಶ ಸ್ವಚ್ಛತೆಗೆ ಆದ್ಯತೆ ನೀಡಿ :** ಗಾಂಧೀಜಿಯವರ ಪ್ರಥಮ ಆದ್ಯತೆ ಸ್ವಚ್ಛತೆಯಾಗಿದ್ದು, ಅವರ ಜನ್ಮದಿನದಂದು ದೇಶದ ಗಲೀಜು ತೊಡೆದುಹಾಕುವ ಸ್ವಚ್ಛತಾ ಅಂದೋಲನದಲ್ಲಿ ಪ್ರತಿಯೊಬ್ಬ ನಾಗರಿಕರು ಪಾಲ್ಗೊಳ್ಳುವಂತೆ ಕರೆ ನೀಡಿದರು.

ನಮ್ಮ ಮನೆಯನ್ನು ಸ್ವಚ್ಛವಾಗಿಡುವ ನಾವು ಸಾರ್ವಜನಿಕ ಪ್ರದೇಶವನ್ನು ಹಾಳು ಮಾಡುತ್ತಿದ್ದೇವೆ. ಇದು ಭಾರತ ಮಾತೆಗೆ ನಾವು ಮಾಡುತ್ತಿರುವ ಅವಮಾನ. ನನಗೆ ನಿಮ್ಮ ನೂರು ಗಂಟೆ ಸಮಯಬೇಕು. ವರ್ಷದಲ್ಲಿ ನಿಮ್ಮಿಂದ ನೂರುಗಂಟೆ ಕೊಡಲು ಸಾಧ್ಯನಾ? ವಾರದಲ್ಲಿ ೨ ಗಂಟೆ ನಿಮ್ಮ ಅಮೂಲ್ಯ ಸಮಯವನ್ನು ನಿಮ್ಮ ಬಡಾವಣೆ, ಬೀದಿ, ಗಲ್ಲಿಗಳನ್ನು ಸ್ವಚ್ಛಗೊಳಿಸುವ ಮೂಲಕ 'ಭಾರತ ಸ್ವಚ್ಛತಾ ಆಂದೋಲನ'ಕ್ಕೆ ಕೈಜೋಡಿಸುವಂತೆ ಕರೆ ನೀಡಿದರು.

**ಶ್ರೀಗಳೊಂದಿಗೆ ಮೋದಿ ಸಮಾಲೋಚನೆ :** ತುಮಕೂರು ವಿಶ್ವವಿದ್ಯಾನಿಲಯದ ಹೆಲಿಪ್ಯಾಡ್‌ಗೆ ಬಂದಿಳಿದ ಪ್ರಧಾನಿ





ನರೇಂದ್ರ ಮೋದಿಯವರು ಕಾರಿನಲ್ಲಿ ಮಠಕ್ಕೆ ಆಗಮಿಸಿದರು. ಮಠದಲ್ಲಿ ಮಕ್ಕಳು, ಮಠದ ಆಡಳಿತ ಮಂಡಳಿ ಪ್ರಧಾನಿಯವರನ್ನು ಸ್ವಾಗತಿಸಿದರು. ಆನಂತರ ಪ್ರಧಾನಿ ಹಿರಿಯ ಶ್ರೀಗಳಾದ ಕರ್ನಾಟಕರತ್ನ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮೀಜಿಗಳ ಆಶೀರ್ವಾದ ಪಡೆದು, ಕೆಲಹೊತ್ತು ಸಮಾಲೋಚನೆ ನಡೆಸಿದರು.

ಈ ಸಂದರ್ಭದಲ್ಲಿ ರಾಜ್ಯಪಾಲ ವಾಜುಬಾಯಿ ವಾಲಾ, ಕೇಂದ್ರ ಸಚಿವರಾದ ಸದಾನಂದಗೌಡ, ಅನಂತಕುಮಾರ್, ಬಿಜೆಪಿ ರಾಜ್ಯಾಧ್ಯಕ್ಷ ಪ್ರಹ್ಲಾದ್ ಜೋಶಿ, ಮಾಜಿಮುಖ್ಯಮಂತ್ರಿಗಳಾದ ಬಿ.ಎಸ್. ಯಡಿಯೂರಪ್ಪ, ಜಗದೀಶ್‌ಶೆಟ್ಟರ್, ಮಾಜಿ ಸಚಿವರಾದ ವಿ.ಸೋಮಣ್ಣ, ಎಸ್. ಶಿವಣ್ಣ, ಮಾಜಿ ಸಂಸದ ಜಿ.ಎಸ್. ಬಸವರಜು, ಮುಖಂಡರಾದ ಜಿ.ಬಿ. ಜ್ಯೋತಿಗಣೇಶ್, ಎಂ.ಬಿ. ನಂದೀಶ್, ಶಿವಪ್ರಸಾದ್, ಸಿ.ವಿ. ಮಹದೇವಯ್ಯ ಮತ್ತಿತರರಿದ್ದರು.

**ಮಾಧ್ಯಮದವರಿಗೂ ನಿರ್ಬಂಧ :** ಸಿದ್ಧಗಂಗಾಮಠಕ್ಕೆ ಪ್ರಧಾನಿ ಮೋದಿ ಭೇಟಿಯ ಹಿನ್ನಲೆಯಲ್ಲಿ ಬಿಗಿ ಪೊಲೀಸ್ ಭದ್ರತೆ ಏರ್ಪಡಿಸಲಾಗಿತ್ತು. ಮಠದ ವಿದ್ಯಾರ್ಥಿಗಳು ಹಾಗೂ ಸಿಬ್ಬಂದಿ ಹೊರತುಪಡಿಸಿ ಮಾಧ್ಯಮದವರ ಪ್ರವೇಶಕ್ಕೂ ನಿರ್ಬಂಧ ವಿಧಿಸಲಾಗಿತ್ತು.

*(ಕೃಪೆ : ವಾರ್ತಾಭಾರತಿ)*

## ನಿಮ್ಮ ನಾಯಕತ್ವದಲ್ಲಿ ದೇಶ ಸರಿಯಾದ ರೀತಿಯಲ್ಲಿ ಸಾಗುತ್ತಿದೆ

**ಪ್ರ**ಧಾನಿ ಮೋದಿ ಅವರು ಸಿದ್ಧಗಂಗಾ ಮಠಾಧೀಶ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮೀಜಿ ಅವರನ್ನು ಭೇಟಿ ಮಾಡಿ ಆಶೀರ್ವಾದ ಪಡೆದರು. ಬುಧವಾರ ಬೆಳಿಗ್ಗೆ ಬೆಂಗಳೂರಿನಿಂದ ತುಮಕೂರು ವಿವಿ ಹೆಲಿಪ್ಯಾಡ್‌ಗೆ ಬಂದಿಳಿದ ಮೋದಿ ನೇರವಾಗಿ ಮಠಕ್ಕೆ ತೆರಳಿದರು.

೧೦ ಗಂಟೆ ೧೦ ನಿಮಿಷಕ್ಕೆ ಮಠಕ್ಕೆ ಬಂದ ಮೋದಿ, ಸುಮಾರು ೩೦ ನಿಮಿಷ ಅಲ್ಲಿದ್ದರು. ಏಳು ನಿಮಿಷ ಶ್ರೀಗಳೊಂದಿಗೆ ಮಾತುಕತೆ ನಡೆಸಿದರು. 'ಬಿಡುವಿಲ್ಲದ ಕಾರ್ಯಕ್ರಮದ ನಡುವೆಯೂ ನೀವು ಮಠಕ್ಕೆ ಭೇಟಿ ನೀಡಿ ಮಕ್ಕಳ ಜೊತೆ ಮಾತನಾಡಿದ್ದು ಸಂತಸ ತಂದಿದೆ. ನಿಮ್ಮ (ಮೋದಿ) ನಾಯಕತ್ವದಲ್ಲಿ ದೇಶ ಸರಿಯಾದ ರೀತಿಯಲ್ಲಿ ಸಾಗುತ್ತಿದೆ' ಎಂದು ಪ್ರಶಂಸಿಸಿದರು. ಇದೇ ಸಂದರ್ಭದಲ್ಲಿ ಜಮ್ಮು-ಕಾಶ್ಮೀರ ಮಳೆ ಸಂತ್ರಸ್ತರ ನೆರವಿಗಾಗಿ ರೂ. ೨೫ ಲಕ್ಷದ ಚೆಕ್‌ಅನ್ನು ಪ್ರಧಾನಿಗಳ ಪರಿಹಾರ ನಿಧಿಗೆ ಸ್ವಾಮೀಜಿ ಅರ್ಪಿಸಿದರು. ಚೆಕ್ ಸ್ವೀಕರಿಸಿ ಮಾತನಾಡಿದ ಮೋದಿ, 'ಈ ದೇಶ ನಿರ್ಮಾಣ ಆಗಿರುವುದು ಸಾಧು ಸಂತರಿಂದ. ಸಿದ್ಧಗಂಗಾಶ್ರೀ ಸಾಧನೆ ಅಪಾರ. ಅವರು ಸಮಾಜಕ್ಕೆ ನೀಡಿರುವ ಕೊಡುಗೆ ಅನನ್ಯ' ಎಂದು ಬಣ್ಣಿಸಿದರು. ಸ್ವಾಮೀಜಿ ಭೇಟಿ ನಂತರ ಮಠದ ವಿದ್ಯಾರ್ಥಿಗಳ ಜೊತೆ ಮಾತುಕತೆ ನಡೆಸಿದ ಮೋದಿ, ಮಕ್ಕಳು ಸ್ವಚ್ಛತೆಗೆ ಒತ್ತು ಕೊಡಬೇಕು. ವಾರಕ್ಕೆ ಎರಡು ಗಂಟೆಗಳನ್ನು ಸ್ವಚ್ಛತೆಗೆ ಮೀಸಲಿಡಬೇಕು ಎಂದು ಸಲಹೆ ನೀಡಿದರು. ಕೇಂದ್ರ ಸಚಿವರಾದ ಡಿ.ವಿ.ಸದಾನಂದಗೌಡ, ಅನಂತಕುಮಾರ್, ಜಿ.ಎಂ. ಸಿದ್ಧೇಶ್ವರ್, ಮಾಜಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಪ್ರಧಾನಿ ಜತೆಗಿದ್ದರು.

**ಕನ್ನಡಪ್ರಭ, ೨೫ನೇ ಸೆಪ್ಟೆಂಬರ್ ೨೦೧೪**

## Learn Sanskrit, PM tells students

Prime Minister Narendra Modi, who visited Siddaganga Math here, hailed the rligious institution for imparting Sanskrit education for imparting Sanskrit education and stressed the importance of Sanskrit.

Addressing the students of the Math on its premises, Mr. Modi said Sanskrit was a treasure trove of Science, art and culture, and a rich source of knowledge. He said Sanskrit would help tell the next generation would help tell the next generation about the contribution of our ancestors towards scince and environment and 'uphold the glorious tradition of Indian knowledge'.

Expressing concern over global warming, he said that Indian shastras tolg how to live without causing any damage to the environment. Mr. Modi touched the feet of the seer of the Siddaganga Math, Sree Shivakumara Swami, and sought his blessings.

A cheque for Rs. 25 lakh was handed over to Mr. Modi for the Prime Minister's National relief Fund for Jammu and Kashmir by the Swami.

*(Courtesy : The Hindu)*

## Modi seeks health tips from Siddaganga Seer

Narendra Modi on wednesday became a tutor for a while, asking students of the Siddaganga Math in Tumkur, 70 km from Bangalore, to dedicate atleast 2 hours a week for a cleanliness drive.

The PM, who visited the mutt to seek the blessings of its pontiff Shivakumara Swami, told over 1,000 students that cleanliness is a vital part of what makes a vital part of what makes a good human being. Buoyed by the success of the Mars mission. Modi called upon students to dream of becoming scientists.

Modi touched the feet of the 107 year old pontiff while seeking his blessings. The PM expressed wonder at the seer's health and agility and sought tips to stay healthy.

Modi said the seer could read without the help of reading glasses and was keen on travelling.

The pontiff felicitated the PM with a saffron shawl and gave him dry fruits and tender coconut water. The mutt also handed over Rs. 25 lakh to the Prime Minsiter's relief fund for Jammu & Kashmir flood relief work.

Modi said when he was Gujarat CM, the seer had invited him to visit the mutt. 'Though it was planned, I couldn't come. But I think Swamiji's wish was that I visit the mutt after becoming PM' he said.

Some BJP leaders appealed to the PM to award the seer the Bhart Ratna for the services he has rendered. BJP national vice-president B.S. Yeddyurappa, Union Minister H.N. Anantha kumar and former minister V. Somanna accompanied Modi. The PM held separate talks with the seer and Yediyurappa.

*(Courtesy : The Times of India)*

ಇವತ್ತು ಜನ ಧರ್ಮವನ್ನು ಮರೆಯುತ್ತಿದ್ದಾರೆ. ಅವರು ಧರ್ಮಪರಿಪಾಲನೆ ಮಾಡುತ್ತಾ ಇಲ್ಲ. ಅಧರ್ಮ ಜಾಸ್ತಿಯಾಗಿ ಸಮಾಜದಲ್ಲಿ ಅಶಾಂತಿ, ಗೊಂದಲ, ಅಸಮಾಧಾನ ಹೆಚ್ಚಾಗುತ್ತಿದೆ. ಮಾನವ ಧರ್ಮದ ದಿವ್ಯಸಂದೇಶ ಏನೆಂದರೆ ಪರಸ್ಪರ ಪ್ರೀತಿ, ವಿಶ್ವಾಸ, ಪ್ರೇಮ. ಪ್ರೇಮಮಯವಾಗಿರುವಂತಹ ಜೀವನ. ಬಸವಣ್ಣನವರು "ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯ, ಇವ ನಮ್ಮವ ಇವ ನಮ್ಮವ ಎಂದೆನಿಸಯ್ಯ" ಎಂದು ಹೇಳಿದ್ದಾರೆ. ಎಷ್ಟು ಒಳ್ಳೆಯ ಮಾತು, ಇಷ್ಟೇ ಸಾರಸರ್ವಸ್ವ. ಆದುದರಿಂದ ಧರ್ಮ ಎನ್ನುವುದು ಜಗತ್ತನ್ನು ಶಾಂತಿ ಸಾಮ್ರಾಜ್ಯವಾಗಿ: ಸುಖಮಯವಾಗಿ, ಸಮೃದ್ಧಿಯನ್ನಾಗಿ ಮಾಡಬಲ್ಲುದು. ಧರ್ಮವೆಂದರೆ ಸುಖಶಾಂತಿ, ಸಮೃದ್ಧಿ ಕೊಡತಕ್ಕ ಒಂದು ಮಹಾಸಂದೇಶ.

– ಶ್ರೀವಾಣಿ







## [illegible]

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಎಲ್ಲಿ ಭೇದವಿದೆ ಅಂಥ ವಸ್ತುವನ್ನು ವರ್ಣಿಸುವುದು ಸುಲಭ. ಹೂ, ಹಣ್ಣು ಭಿನ್ನ ಭಿನ್ನ; ಅವುಗಳ ಆಕಾರ ವರ್ಣ ವಾಸನೆ ಎಲ್ಲ ಬೇರೆ ಬೇರೆ. ಈ ಭಿನ್ನತೆಯೇ ಆಯಾ ವಸ್ತುವಿನ ವಿಶೇಷ ರೂಪ. ಅದನ್ನು ಸಲೀಸಾಗಿ ಬಣ್ಣಿಸಬಹುದು. ನಾನು ನಿಮ್ಮನ್ನು ವರ್ಣಿಸಬಲ್ಲೆ, ನೀವು ನನ್ನನ್ನು ವರ್ಣಿಸಬಲ್ಲಿರಿ. ನನ್ನ ನಿಮ್ಮ ದೇಹ, ಭಾವನೆ, ವಿಚಾರ ಭಿನ್ನ ಭಿನ್ನ. ಆ ಭಿನ್ನತೆಯೇ ನನ್ನ ನಿಮ್ಮ ವಿಶೇಷತೆ. ಅದನ್ನು ಗುರುತಿಸುವುದೇ ವರ್ಣನೆ. ಸಾಮಾನ್ಯವಾಗಿ ಈ ವಿಶೇಷಾಂಶ ವಿಶ್ವವನ್ನೆಲ್ಲಾ ವ್ಯಾಪಿಸಿದೆ. ಒಳಗೆ ಮನೋವಿಶ್ವವನ್ನೂ ವ್ಯಾಪಿಸಿದೆ ! ಆದ್ದರಿಂದ ಸಮಸ್ತ ಬಾಹ್ಯಾಂತರ ಜಗತ್ತು ಸವಿಶೇಷ ! ವರ್ಣನೀಯ !

ನನ್ನೊಳಗಿರುವ ಹಾಗೂ ನಿಮ್ಮೊಳಗಿರುವ ವಿಶೇಷಾಂಶ ಸರಿಸಿದರೆ ಏನು ಉಳಿಯುವುದೋ ಆಧಾರವಾಗಿ ಆ ತತ್ತ್ವವು ನಿರ್ವಿಶೇಷ ! ಅಲ್ಲಿ ನಾನೂ ಇಲ್ಲ, ನೀವೂ ಇಲ್ಲ. ಆದರೆ ವರ್ಣಿಸಲಾಗದ ಅದ್ವಯ ಸತ್ಯವಿದೆ! ಅಲ್ಲಿ ವಿಶೇಷಾಂಶ ಇಲ್ಲದ್ದರಿಂದ 'ಎರಡು' (ದ್ವಯ) ಎಂಬ ಕಲ್ಪನೆ ಶೂನ್ಯ! ಅದು ಅ–ದ್ವಯ !

ಎರಡು ಸಂಖ್ಯೆಗಳಲ್ಲಿರುವ ವಿಶೇಷಾಂಶ ತೆಗೆದುಹಾಕಿದಾಗ ಉಳಿಯುವುದು ಶೂನ್ಯ. ಸಂಖ್ಯೆ ಎರಡಾದರೂ ಶೂನ್ಯ ಎರಡಾಗವು. ಎಲ್ಲ ಸಂಖ್ಯೆಗಳ ನಿರ್ವಿಶೇಷವಾದ ತತ್ತ್ವ ಏಕೈಕ ಅಥವಾ ಅ–ದ್ವೈತ ಶೂನ್ಯ. ಸಂಖ್ಯೆಗೆ ಮೂಲ್ಯ ಶೂನ್ಯಕ್ಕಿಲ್ಲ. ಶೂನ್ಯದಲ್ಲಿ ದೊಡ್ಡದು ಸಣ್ಣದಿಲ್ಲ. ಆಕಾಶದೊಳಗೆ ಇದ್ದರೂ–ಭೂಮಂಡಲದೊಳಗೆ ಇದ್ದರೂ ಶೂನ್ಯ ಶೂನ್ಯವೇ. ಅಳತೆಗೆ ನಿಲುಕುವ ವಿಶೇಷತೆ ಅದರಲ್ಲಿಲ್ಲ. ಅದು ನಿರ್ವಿಶೇಷ.

ಅದರಂತೆ ನಾನು ಹೀಗೆ, ನೀವು ಹಾಗೆ ಎಂದು ಎಲ್ಲಿಯವರೆಗೆ ವರ್ಣಿಸುತ್ತೇವೆ ಅಲ್ಲಿಯವರೆಗೆ ನಮ್ಮ ವಿಶೇಷಾವಸ್ಥೆ. ಈ ವಿಶೇಷಾಂಶದ ಕ್ಷೇತ್ರವನ್ನು ನಾವು ದಾಟಬೇಕು. ಹಾಗೆ ದಾಟುವುದರಿಂದ ನಾವು ದೈಹಿಕ ರೂಪಿನ ಆಚೆ ಹೋಗುತ್ತೇವೆ. ಮನದ ಆಲೋಚನೆಗಳಾಚೆ ಸರಿಯುತ್ತೇವೆ. ನಾನು–ನೀವು ಎಂಬ ಭಾವನೆಗಳಾಚೆ ಚಲಿಸುತ್ತೇವೆ. ಆಗ ನಾವು ಉಳಿಯುತ್ತೇವೆ. ಆದರೆ ಭೇದಾಂಶಗಳು ಮರೆಯಾಗುತ್ತವೆ. ಉಳಿದ ನಾವು–ನಾನೂ ಅಲ್ಲ. ನೀವೂ ಅಲ್ಲ. ಅದು ಅವಿಶೇಷ ಸತ್ಯ ! ಅದು ನನ್ನದಲ್ಲ, ನಿಮ್ಮದೂ ಅಲ್ಲ. ಅದು ನಾನೂ ಸರಿ; ನೀವೂ ಸರಿ. ನಾನು ನೀವು ಎಂಬ ಭೇದ ಮರೆಯಾದ ಘನವಸ್ತು !

ರಾಮ, ಕೃಷ್ಣರು ಬೇರೆ ಬೇರೆ. ರಾಮ ತ್ರೇತಾ ಯುಗದವ. ದಶರಥನ ಮಗ, ಸೀತೆಯ ಪತಿ. ಅಯೋಧ್ಯೆಯ ಅರಸ. ಲವಕುಶರ ತಂದೆ. ಕೃಷ್ಣದ್ವಾಪರ ಯುಗದವ. ವಸುದೇವನ ಮಗ. ರಾಧೆಯ ಪತಿ, ದ್ವಾರಕೆಯ ಅರಸ, ಸಾವಿರಾರು ಮಕ್ಕಳ ತಂದೆ ! ರಾಮ, ಕೃಷ್ಣ ರೊಳಗಿರುವ ವಿಶೇಷಾಂಶ ಕಳಚಿದಾಗ ಉಳಿದುದು ರಾಮ ಮೂಲ, ಕೃಷ್ಣಮೂಲ! ಅದು ಒಂದು ವಿಷ್ಣು; ನಿರ್ವಿಶೇಷ. ವಿಶೇಷಗಳು ಅವತಾರ; ನಿರ್ವಿಶೇಷವು ಮೂಲದೇವ. ನಾನಾಗಲಿ ನೀವಾಗಲಿ ಎಲ್ಲರೂ ಒಂದು ರೀತಿಯಲ್ಲಿ ಅವತಾರಗಳೇ ಅಂದರೆ ವಿಶೇಷಾಂಶಗಳೇ. ಭೇದ ಕ್ಷೇತ್ರ ಅವತಾರದ್ದು. ಅಭೇದ ಕ್ಷೇತ್ರ ಮೂಲ ದೇವನದು. ಅಭೇದ ಕ್ಷೇತ್ರಕ್ಕೇರಿದರೆ ರಾಮಾದಿಗಳು ಮರೆ; ನಾನು ನೀವು ಮರೆ! ಎಲ್ಲಿ? ಒಂದೇ ತತ್ತ್ವದಲ್ಲಿ! ಆದ್ದರಿಂದ ಎಲ್ಲರೂ ಒಂದೇ ವಸ್ತುವಿನ ವಿವಿಧ ಅವತಾರಗಳು. ಇಷ್ಟೇ, ಅವರಿಗೆ ತಮ್ಮ ನಿರ್ವಿಶೇಷದ ಭಾನವಿದೆ. ನಮಗಿಲ್ಲ. ಈ ಅರ್ಥದಲ್ಲಿ ಮಾತ್ರ ನಾವು ಅವತಾರಿಗಳಲ್ಲ.

*ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ*
*ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್*

ಧರ್ಮದ ಗ್ಲಾನಿಯಾದಾಗಲೆಲ್ಲ ನಾನು ಅವತರಿಸುತ್ತೇನೆ ಎಂದ ಕೃಷ್ಣ. ಆದರೆ ಧರ್ಮದ ಗ್ಲಾನಿ ಯಾವುದೋ ಒಂದು ಕಾಲದಲ್ಲಿ ನಡೆಯುವುದೆಂದಲ್ಲ. ಯಾವಾಗಲೂ ಎಲ್ಲ ಕಾಲ ಖಂಡದಲ್ಲೂ ಒಂದೊಂದು ಕಡೆ ಗ್ಲಾನಿಯಾಗುತ್ತದೆ. ಆಗಾಗ ಅಷ್ಟಿಷ್ಟು ಸರಿಗೊಳಿಸಲು ಅವತಾರ ಆಗುತ್ತಲೇ ಇರುತ್ತದೆ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಅವತಾರಗಳು ಮೇಲಿನಿಂದ ಕೆಳಗಿಳಿಯುವುದಿಲ್ಲ. ಏಕೆಂದರೆ, ದೇವರು ಮೇಲೆ ಇದ್ದಾನೆ, ಕೆಳಗಿಲ್ಲವೆಂದಲ್ಲ. ಅವನಲ್ಲಿ ಮೇಲೆ ಕೆಳಗೆ ಎನ್ನುವುದೇ ಎಲ್ಲ. ಮೇಲೆ ಇದ್ದರೆ ಕೆಳಗಿಳಿಯುವುದು, ಅವತರಿಸುವುದು! 'ಈಶಾವಾಸ್ಯ' ಎಲ್ಲೆಡೆ ಆತನಿದ್ದಾನೆ, ಚಲಿಸುವ ಪ್ರತಿವಸ್ತುವಿನಲ್ಲೂ! ಅಣು ಅಣುಗಳಲ್ಲಿ ಆದ್ದರಿಂದ ಅವತಾರವೆಂದರೆ ಅವತರಣವಾದು ದಲ್ಲ, ಅಭಿವ್ಯಕ್ತವಾದುದು! ಅಂದರೆ ನಾನು ನನ್ನ ಒಳಹೊರಗಿರುವ ನಿರ್ವಿಶೇಷ ಸತ್ಯದ ಅರಿವು ಹೊಂದಿದರೆ ನನ್ನಲ್ಲಿ ಭಗವಂತ ಅವತರಿಸಿದ ಎಂದರ್ಥ! ನಾವು ಆತ್ಮಭಾನವಿಲ್ಲ ದಾಗ ಸಾಮಾನ್ಯರು; ಭಾನವಿದ್ದಾಗ ಅವತಾರಿಗಳು. ಒಂದೊಂದು ಕಾರ್ಯಕ್ಕಾಗಿ ಬಂದವರು.

ನಮ್ಮಲ್ಲಿ ಕೆಲವರು ಒಂದು ಮನೆ ಉದ್ದರಿಸಲು ಬಂದವರು; ಕೆಲವರು ಒಂದು ಚಿಕ್ಕ ಸಮಾಜ ಉದ್ಧಾರ ಮಾಡಬಂದವರು. ಒಂದು ದೇಶ ಉದ್ಧಾರ ಮಾಡಲು ಬಂದವರು ಕೆಲವರು! ನಾವು ಹೀಗೆ ಖಚಿತ ತಿಳಿದುಕೊಂಡು ಬಿಟ್ಟಿದ್ದೇವೆ. ಎಂದೇ ನಾವಿರದಿರೆ 'ಈ ಮನೆ ನಡೆಯುವುದಿಲ್ಲ' ಎನ್ನುತ್ತೇವೆ. ನನ್ನ ಕಣ್ಣೆದುರಿಗೆ ಮಕ್ಕಳು ಹೀಗೆಲ್ಲಾ ಮಾಡುತ್ತಿದ್ದಾರೆ. ನಾವು ಹೋದ ಬಳಿಕ ಇದು ಹೇಗೆ ನಡೆಯೋದು? ಎಂದು ವ್ಯಥೆ ಪಡುತ್ತೇವೆ. ಅಂದರೆ ಆ ಮನೆಯನ್ನು ಉದ್ಧರಿಸುವುದಕ್ಕಾಗಿ, ಆ ಹೆಂಡತಿ ಮಕ್ಕಳನ್ನು ರಕ್ಷಿಸುವುದಕ್ಕಾಗಿ, ಸಂಪತ್ತನ್ನು ಬೆಳೆಸುವುದಕ್ಕಾಗಿ ನಾವು ಅವತರಿಸಿದವರು! ನಾವು ಪ್ರಾಪಂಚಿಕ ಅವತಾರಿಗಳು! ಈ ಪ್ರಪಂಚದ ಅವತಾರಿಗಳು! ಆದರೆ ಪ್ರಪಂಚವನ್ನು ಕಟ್ಟುವುದಕ್ಕಾಗಿ ಬಂದ ಅವತಾರಿಗಳು ಬೇರೆ. ದಿವ್ಯಪ್ರಜ್ಞೆಯನ್ನು ಭೂಮಂಡಲಕ್ಕೆ ಅಭಿವ್ಯಕ್ತಗೊಳಿಸುವುದಕ್ಕೆ ಬಂದ ಅವತಾರಿಗಳು ಬೇರೆ!

ಮನಸ್ಸಿನ ಮಧ್ಯೆ ಒಂದಿಷ್ಟು ಧೂಳು ಬಿತ್ತು. ಹಾಗೆ ಧೂಳು ಬಿದ್ದಿದ್ದರಿಂದ ನಿರ್ವಿಶೇಷತೆಯ ಭಾನ ಬರಲಿಲ್ಲ. ವಿಶೇಶತೆಯೇ ಪ್ರಧಾನವಾಯ್ತು. ಮೊದಲು ಮನೆ ಸ್ವಚ್ಛ, ಭವ್ಯ, ಕಟ್ಟುವಾಗ; ಕಟ್ಟಿದಾಗ. ದಿನ ಹೋಯಿತಾದರೆ ಕಸ, ಧೂಳು ಅಲ್ಲಿ ಬೀಳುವುದೇ, ಬೀಳುತ್ತಲೇ ಇರುವುದು. ಅದರಂತೆ ಜಗತ್ತು. ಅದು ವಿಶಾಲ ಮನೆ, ಕೋಟ್ಯಂತರ ವರುಷದ ಹಿಂದೆ ರಚನೆಗೊಂಡಿದೆ. ಅದರಲ್ಲಿಯೂ ನೆಲ ನೀರು ಗಾಳಿ ಅಗ್ನಿಗಳ ಮೂಲಕ ಧೂಳು, ಮಾಲಿನ್ಯ ತಲೆದೋರುತ್ತದೆ. ಸದಾ ಸ್ವಚ್ಛವಾಗಿರದು ಯಾವುದೂ! ಏನೂ! ಎಲ್ಲೆಲ್ಲಿ ಭೇದ ಇದೆ ಅಲ್ಲಿ ಧೂಳು ಬೀಳುವುದೇ. ಆದರೆ ಧೂಳಿನ ಪ್ರಕಾರ ಬೇರೆ ಬೇರೆ.

ಬಡವರ ಮನೆಯಲ್ಲಿ ಧೂಳು ಬೀಳುತ್ತದೆ. ಶ್ರೀಮಂತರ ಮನೆಯಲ್ಲೂ ! ಇವರು ಪಾಪಿಗಳು; ಪಾಪಿಗಳ ಮನೆಯೊಳಗೆ ಧೂಳು, ಯೋಗಿಗಳ ಆಶ್ರಮದಲ್ಲಿಯೂ. ಧೂಳು ಜಗತ್ತಿನಲ್ಲಿ ಬೀಳುತ್ತಲೇ ಇರುವುದು. ಹಾಗೆ ಮನಸ್ಸಿನಲ್ಲೂ ಧೂಳು ಬಂದು ಬೀಳುವುದು. ವಿವಿಧ ವ್ಯಕ್ತಿಗಳ ಕಂಡಾಗ, ಸಮಾಜ ನೋಡಿದಾಗ ವಿಭಿನ್ನ ಭಾವನಾ ಧೂಳು ಮನಸ್ಸಿನಲ್ಲಿ ಬಂದು ಬೀಳುತ್ತದೆ. ಮನಸ್ಸು ಎನ್ನುವುದು ಮನೆ, ಇಂದ್ರಿಯಗಳು ಕಿಟಕಿಗಳು. ಆ ಕಿಟಕಿಯ ಮೂಲಕ ಧೂಳು ಬಂದು ಬೀಳುತ್ತದೆ. ಮನಸ್ಸು ಎನ್ನುವುದು ಮನೆ. ಹೊರಗಿನ ಧೂಳು ಝಾಡಿಸಿದರೆ ಹೋಗುತ್ತದೆ. ಆದರೆ ಒಳಗೆ ಬಿದ್ದ ಧೂಳು ಅಷ್ಟು ಸುಲಭವಾಗಿ ಹೋಗುವುದಿಲ್ಲ. ಅದನ್ನು ಝಾಡಿಸುವ ರೀತಿಯೂ ನಮಗೆ ತಿಳಿಯದು.

*ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ?*
*ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ*
*ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ?*
*ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ*
*ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲಸಂಗಮದೇವ*

ನಮ್ಮ ಮನೆಯ ಚಿತ್ರಣ ಹೊಸ್ತಿಲಲ್ಲಿ ಹುಲ್ಲು, ಮನೆಯೊಳಗೆ ರಜ. ಮನೆಯಲ್ಲಿ ಮಾಲೀಕನಿದ್ದರೆ, ಎಚ್ಚರಾಗಿದ್ದರೆ ಹುಲ್ಲು ಹುಟ್ಟಬಾರದು; ಧೂಳು ಬೀಳಬಾರದು. ಹೊರಗೆ ಹುಲ್ಲು ಹುಟ್ಟಿದೆ, ಇಳಗೆ ಧೂಳು ತುಂಬಿದೆ. ಇದರರ್ಥ ಮಾಲೀಕ ಒಳಗಿಲ್ಲ ಅಥವಾ ಮಾಲೀಕ ಎಚ್ಚರಾಗಿಲ್ಲ ಅಥವಾ ಉನ್ಮತ್ತ.

ದೇಹ ಮನೆ, ನಾಲಿಗೆ ಹಾಗೂ ಕೈಗಳು ಬಾಗಿಲು. ಅವುಗಳಲ್ಲಿ ಹುಲ್ಲು ಬೆಳೆದಿದೆ. ಮಾತಿನಲ್ಲಿ, ಕೈಗಳ ಕಾರ್ಯದಲ್ಲಿ 'ಹುಸಿ' ಬೆಳೆದಿದೆ! ಧಾರಾಳವಾಗಿ! ಧಾರ್ಮಿಕ ಕ್ಷೇತ್ರವೇ ಇರಲಿ, ಸಾಮಾಜಿಕ ಕ್ಷೇತ್ರವೇ ಇರಲಿ ಅಲ್ಲೆಲ್ಲ ಈ ಅಸತ್ಯದ ಹುಲ್ಲು ಹುಲುಸಾಗಿ ಹುಟ್ಟಿದೆ! ದೇವಮಂದಿರ, ಮಠಮಾರು, ಕಛೇರಿಗಳು, ಶಾಲೆ ಕಾಲೇಜುಗಳು, ವ್ಯಾಪಾರೀ ಕೇಂದ್ರಗಳು -ಹಳ್ಳಿ ಅಥವಾ ದೆಹಲಿ; ಎಲ್ಲೆಡೆ ಸತ್ಯ ಮಾಯವಾಗಿದೆ; ಹಚ್ಚ ಹಸಿರಾದ ಹಸಿ-ಹುಲ್ಲು ನಿಂತಿದೆ !

ಒಳಗೂ ಅಷ್ಟೇ. ಅಲ್ಲಿ ಅಸಮಾಧಾನದ ಧೂಳು. ದ್ವೇಷ ಮಾತ್ಸರ್ಯ ದುರಾಸೆಗಳ ರಜ. ಯಥೇಚ್ಛ ಬಿದ್ದಿದೆ. ಅದು ಸ್ವ-ಪರ ವಿನಾಶಕ ಕಸ. ಬದುಕಿನ ಸೊಬಗ ಕೆಡಿಸುವ ಮಾಲಿನ್ಯ. ಅಕಾರಣವಾಗಿ ಅಸಮಾಧಾನ! ನನ್ನ ಕಂಡು





ನೀವು, ನಿಮ್ಮ ಕಂಡು ನಾನು ಹರ್ಷಿಸಬೇಕಲ್ಲ? ಹಾಗಾಗುತ್ತಿಲ್ಲ. ನಿಮ್ಮಿಂದ ಏನನ್ನಾದರೂ ಪಡೆವ ಆಸೆ ನನಗೆ; ಕೈಗೂಡದಾಗ, ನಿಮ್ಮ ಕುರಿತು ದ್ವೇಷ. ಸನ್ಯಾಸ ಜೀವನದಲ್ಲಿ ಈ ಧೂಳು! ನಾನು ಹೇಳುವ ರೀತಿ ನೀತಿಗಳಲ್ಲಿ ಅಸಮಾಧಾನ ನಿಮಗೆ! ನಾನು ಬಳಸುವ ಈ ಬುದ್ಧ ಶಂಕರ ಬಸವ ಲಾವ್ರೋ ನಿಮ್ಮಲ್ಲಿ ಬಹುಜನರಿಗೆ ಹಿಡಿಸದಿರುವ ಸಾಧ್ಯತೆಯೂ ಹೆಚ್ಚು! ಏನು ನಿಮ್ಮ ಬದುಕು! ಅಶಾಂತ! ಧೂಳು ಧೂಳು!

ಒಂದು ಹೂ ನೋಡಿ ಅರಳುವ ಕಣ್ಣು, ಮಕರಂದವನ್ನು ಆಸ್ವಾದನೆ ಮಾಡಿ ವಿಕಸಿಸುವ ಹೃದಯ; ಅಪೇಕ್ಷಣೀಯ. ನಾನು ಆಗಲಿ, ಅಥವಾ ನೀವಾಗಲಿ ಪರಸ್ಪರ ಕಂಡು, ಜಗವ ನೋಡಿ ಸಂತೋಷಿಸಬೇಕು. ನೀವು ಕಷ್ಟ ಪಟ್ಟು ಮನೆ, ಹೊಲ, ಧನ ಸಂಪಾದನೆ ಮಾಡಿದವರು, ಸಾಹಸಿಗಳು, ಶ್ರಮಶೀಲರು. ಪ್ರಪಂಚದ ವ್ಯವಹಾರದ ಮಧ್ಯ ಸಮಯ ಉಳಿಸಿ, ಇಲ್ಲಿ ಬಂದು ಕುಳಿತ ತನ್ಮಯರಾಗಿ ಕೇಳುವುದ ಕಂಡಾಗ, ನಿಮ್ಮ ಪ್ರಸನ್ನಮುಖ ನೋಡಿದಾಗ ನನಗೆ ಸಮಾಧಾನವಾಗದಿದ್ದರೆ ನನ್ನಲ್ಲಿ 'ಮನೆಯೊಡೆಯ ಇಲ್ಲ ಕಾಣಾ'.

'ಮಾತ್ಸರ್ಯ!' ಅವರು ಚೆನ್ನಾಗಿರುವ ಚಪ್ಪಲಿ ಹಾಕಿಕೊಂಡು ದಾರಿಯಲ್ಲಿ ನಡೆದರೆ, ನನಗೆ ತಾಪ ಆಗುತ್ತದಲ್ಲ ಇದು ಮಾತ್ಸರ್ಯ! ನನ್ನ ಮೆತ್ತನೆಯ ಈ ವೇದಿಕೆ ಕಂಡು ತಾಪವಾಗುತ್ತದಲ್ಲ ಅದು ಅಸೂಯೆ. ಮಾತ್ಸರ್ಯವಿದು ಹೊಟ್ಟೆಯಲ್ಲಿ. ಒಳಗೆ ಹತ್ತಿರುವ ಬೆಂಕಿ! ಕಾರಣವೇ ಇಲ್ಲದೆ ಹೊತ್ತಿಕೊಳ್ಳುವ ಅಗ್ನಿ. ಯಾರದೋ ಭವ್ಯ ಮನೆ; ನೋಡಿದ ನನಗೆ ತಾಪ! ನೆರೆಯವ ಬೆವರು ಸುರಿಸಿ ಹುಲುಸಾಗಿ ಬೆಳೆಸಿದ ಪೈರು ಕಂಡವನ ಹೃದಯದಲ್ಲಿ ತಡೆಯಬಾರದ ಸಂಕಟ! ತಾನಾಗಿಯೇ ನಮ್ಮಂತರಂಗದಿ ಬಂದು ಬಿದ್ದುದರಿಂದ ಅದು 'ಧೂಳು' ಎಂದ ಬಸವಣ್ಣ.

ಇತಿಹಾಸದ ತುಂಬಾ ನೋಡಿ, ಮಾತ್ಸರ್ಯದ ಕಥೆಗಳು! ಎಂತಹ ಅದ್ಭುತ ಕಥೆಗಳನ್ನು ನಿರ್ಮಾಣ ಮಾಡಿದ್ದಾರೆ! ರಾಮಾಯಣ, ಮಹಾಭಾರತದೊಳಗೆ ನೂರಾರು ಕಥೆಗಳು. ಮಾತ್ಸರ್ಯದ ಕಥೆಗಳು ಅವು. ಅಂದಿನ ಕಥೆಗಳಲ್ಲ ಅವು. ಇಂದು ನಾಳಿನ ಕಥೆಗಳು, ಎಂದೆಂದಿನ ಕಥೆಗಳು. ನಮ್ಮೆಲ್ಲರ ಬಾಳಿನ ಕಥನಗಳು.

ಬಾಗಿಲಿನಲ್ಲಿ ಬೆಳೆದ ಹುಸಿ-ಹುಲ್ಲನ್ನು ಕೆತ್ತಿ ತೆಗೆಯಬೇಕು. ಮನಸ್ಸಿನೊಳಗಿರುವ ಧೂಳನ್ನು ಗುಡಿಸಿ ಚೆಲ್ಲಬೇಕು.

ಈ ಕಾರ್ಯ ಮಾಡುವುದಕ್ಕಾಗಿಯೇ ಭಗವಂತ ಶರಣರನ್ನು, ಸಂತರನ್ನು ಭೂಮಂಡಲಕ್ಕೆ ಕಳುಹಿಸಿಕೊಟ್ಟ ನೇನೋ. ಸಂತ, ಮಹಂತ ಗಾಳಿಯಂತೆ ನಮ್ಮ ಸುತ್ತ ಮುತ್ತ ಸುಳಿದಾಗ ನಮ್ಮ ಮನ-ಮನೆಯ ಬಾಗಿಲಲ್ಲಿ ಸಹಜ ಸುಳಿದು ತನ್ನ ಮಾತಿನ ಮೂಲಕ, ನೋಟದ ಮೂಲಕ, ಮನದ ಧೂಳ ಝಾಡಿಸುತ್ತಾನೆ. ಇಂದ್ರಿಯ ಬಾಗಿಲವ ಕಸವ ಕಿತ್ತೆಸೆಯುತ್ತಾನೆ. ಸ್ವಚ್ಛ ಮಾಡುತ್ತಾನೆ. ಮಹಾವೀರ ಬಂದ, ರಾಗದ ಧೂಳನ್ನು ಝಾಡಿಸಿ ಹೋದ, ವಿರಾಗದ ಪರಿಮಳ ಹರವಿದ ಜಗತ್ತಿನಲ್ಲಿ. ಬುದ್ಧ ಬಂದ, ದುರಾಸೆಯನ್ನು ಝಾಡಿಸಿ ಹೋದ. ಬಸವಣ್ಣ ಬಂದು ಮೇಲು ಕೀಳು ಎಂಬ ಭೇದ ಭಾವವನ್ನು ತೆಗೆಯಲು ಯತ್ನಿಸಿದ. ಆಚಾರ್ಯ ಶಂಕರ ಅಜ್ಞಾನದ ಕಲ್ಮಷ ಝಾಡಿಸಿದ. ಕಲ್ಮಷ ಹರಡಲು ಕಾರಣ ತಿಳುವಳಿಕೆಯ ಅಭಾವ, ಸರಿಯಾಗಿ ವಸ್ತು ಸತ್ಯವನ್ನು ನೋಡದಿರುವುದು; ಹೀಗೆಂದರು ಶಂಕರರು. ಮನುಷ್ಯ ಸರಿಯಾಗಿ ಜಗತ್ತನ್ನು ನೋಡಿದ್ದರೆ ಅದರ ಮೋಹಜಾಲದಿಂದ ಹೊರಗುಳಿಯುತ್ತಿದ್ದ. ಸಿಗರೇಟ್ ಪ್ಯಾಕಿನ ಮೇಲೆ ಬರೆದುದನ್ನು ಚೆನ್ನಾಗಿ ಓದಿದ್ದರೆ, ಸೇದುವ ಪ್ರಸಂಗವೆಲ್ಲಿ ಬರುತ್ತಿತ್ತು? ಓದ ಬಂದೂ ಓದಲಿಲ್ಲ; ಓದಿಯೂ ಓದಲಿಲ್ಲ! Injurious to somebody's health ಎಂದು ಓದಿದ. ಹೀಗೆಯೇ ಎಲ್ಲ! ಈ ಜ್ಞಾನ ದೃಷ್ಟಿಯ ನಿಮೇಷವೇ ಅಂತರಂಗದ ಎಲ್ಲ ಕಲ್ಮಷಕ್ಕೆ ಪ್ರಧಾನ ಕಾರಣ.

ನಮ್ಮ ತಿಳಿವಿನ ನೇತ್ರ ತೆರೆದಿಲ್ಲ, ಮುಚ್ಚಿದೆ! ಹೀಗಾಗಿ ಜಗತ್ತು ಕಂಡರೂ ಜಗದ ಸತ್ಯ ಕಾಣದು. ಉದಾಹರಣೆಗಾಗಿ, ಆಹಾರ ಪದಾರ್ಥಗಳಲ್ಲಿ ಮಿಶ್ರಣ ಮಾಡಬಾರದು; ನಮಗಿದು ಚೆನ್ನಾಗಿ ಗೊತ್ತು; ಆದರೆ ಕೊಳ್ಳುವಾಗ ಮಾತ್ರ! ಮಾರುವಾಗ ಅಲ್ಲ! ಕಳವು, ನಿಂದೆ, ಅಸೂಯೆ ಎಲ್ಲವೂ ಕೆಟ್ಟದು; ನಮಗಲ್ಲ; ಉಳಿದವರಿಗೆ! ಎಂತಲೇ ಆಚಾರ್ಯ ಶಂಕರ, ಮಹಾತ್ಮ ಬಸವಣ್ಣ ಮುಂತಾದವರೆಲ್ಲ ತಿಳುವಳಿಕೆ ಎನ್ನುವ 'ಬಾರಿಗೆ' ತಂದರು ಜಗತ್ತಿಗೆ; ಚೆನ್ನಾಗಿ ಗುಡಿಸಿದರು ಸಾವಿರಾರು ಮನಸ್ಸುಗಳ! ಕೆಲವು ಸ್ವಚ್ಛವಾದವೆನ್ನಿ! ಆದರೆ ಲಕ್ಷ ಲಕ್ಷ ಮನ-ಮನೆಗಳು ಇಲ್ಲಿ ಚೆಲ್ಲಿ ಬಯಲ ಬೆರೆತು ಹೋದರು.

ಆ ಬಾರಿಗೆ ಎಲ್ಲಿವೆ ಅಲ್ಲಿಯೇ ಇವೆ; ಯಾರೂ ಅವುಗಳನ್ನೆತ್ತಿ ತಮ್ಮ ತಮ್ಮ ಮನೆ-ಮನ ಗುಡಿಸರು ! 'ಬಸವಣ್ಣ ನೀನು ಬೇಗನೆ ಬಾ ಮತ್ತೆ. ನಿನಗಾಗಿ ಕಾತರಿಸಿದ್ದೇವೆ; ನೀನು ಬರದಿರಲು ಲೋಕಕ್ಕೆ ಉಳಿಗಾಲವಿಲ್ಲ' ಎಂದು

ಪ್ರಾರ್ಥಿಸುತ್ತೇವೆಯೇ ವಿನಃ ಆ ತಿಳುವಳಿಕೆ ಬಾರಿಗೆ ಬಳಸಲು ಸಿದ್ಧರಿಲ್ಲ! ಆ ಶಂಕರ, ಆ ಬಸವಣ್ಣ ನಮ್ಮ ಈ ವಿಚಿತ್ರ ವರ್ತನೆ ಕಂಡು, 'ನಾವೆಲ್ಲ ಬಾರಿಗೆಗಳ ಭದ್ರವಾಗಿ ಕಟ್ಟಿಟ್ಟಿದ್ದೇವೆ; ಅವುಗಳನ್ನು ಉಪಯೋಗಿಸುವ ವಿಧಾನವನ್ನು ವಿವರಿಸಿದ್ದೇವೆ; ಪ್ರತ್ಯಕ್ಷ ತೋರಿಸಿಯೂ ಇದ್ದೇವೆ. ಅವುಗಳನ್ನು ನೀವಾಗಿಯೇ ಅದೇಕೆ ಬಳಸುತ್ತಿಲ್ಲ? ನಿಮ್ಮ ಈ ಆಲಸ್ಯ, ತಂದ್ರೆ ಕಂಡು ನಮಗೆ ಅಚ್ಚರಿ ! ಕನಿಕರ ಕೂಡ !' ಎಂದಾರು.

ಸಂತರ ವಚನ ನೂರಾರು; ಅವು ಬಾರಿಗೆಗಳು. ಬೇಕಾದುದನ್ನು ಎತ್ತಿಕೊಳ್ಳಿ. ಮನನಿಸಿ, ಬಳಸಿ! ಅದರಿಂದ ಹೊರ-ಒಳಗೆಲ್ಲ ಸ್ವಚ್ಛ. 'ನಿನ್ನನ್ನು ಸರಿಗೊಳಿಸಿಕೊ; ಜಗತ್ತು ತಾನಾಗಿಯೇ ಸರಿಯಾಗುತ್ತದೆ!' ಎಂದರು ಯುರೋಪಿನ ಚಿಂತಕರು. ನಮ್ಮಲ್ಲಿ ಕೆಲವರಿಗೆ ನಮ್ಮ ಸಂತರೆಂದರೆ ಆಗದು. ಪರದೇಶದ ಚಿಂತಕರ ಮಾತು ಅವರಿಗೆ ಪ್ರಮಾಣ! ನಮ್ಮ ಹತ್ತಿ, ಮ್ಯಾಂಚೆಸ್ಟರ ಮುದ್ರೆ ಹೊತ್ತು ಬಂದಾಗ ಗ್ರಾಹ್ಯ, ನಮ್ಮ ಮಹಾನುಭಾವರ ಮಾತು ಆಂಗ್ಲರ ಗಾಳಿಯಲ್ಲಿ ತೇಲಿ ಇಲ್ಲಿಗೆ ಬಂದಾಗ ಸ್ವೀಕಾರಾರ್ಹ! ಹೇಗಾದರೂ ಸರಿಯೆ, ದೂರವಾದರೂ ಸರಿಯೆ, ಆದೇಶ ಸ್ವೀಕರಿಸಿ ನಮ್ಮ ಬದುಕ ಹದುಳಾಗಿಸುವುದು ಮುಖ್ಯ.

ದೀಪ ಹತ್ತಿದಾಗ ಮಲಗಿಕೊಂಡೆವು. ದೀಪವು ಎಂಟ್ಟತ್ತು ದಶಕ ದಾರಿಕಾಯ್ದು ಆರಿಹೋಯ್ತು. ನಾವು ಎದ್ದುದು ಯಾವಾಗ? ಅದು ಆರಿಹೋದಾಗ! ಹಾಗೆ ಸಂತರು ಬಂದಾಗ ಮಲಗಿಕೊಂಡೆವು; ಅವರು ದಾರಿ ಕಾಯ್ದು ಹೋದರು. ಅವರಿಲ್ಲದುದ ಕನಸಿನಲ್ಲಿ ಕಂಡು ಕನವರಿಸಿದೆವು ಬಸವಣ್ಣ, ಅಲ್ಲಮ, ಬುದ್ಧ ನಮ್ಮ ಕಾಲದಲ್ಲಿಲ್ಲ ವಲ್ಲ ಎಂದು. ಈವಾಗ ಇಲ್ಲವೇನು ಬುದ್ಧ ಮಹಾವೀರ ಅಲ್ಲಮರಂಥ ವ್ಯಕ್ತಿಗಳು? ಯಾವಾಗಲೂ ಎಲ್ಲಾ ಕಾಲಕ್ಕೂ ಇದ್ದೇ ಇರುತ್ತಾರೆ. ಆದರೆ ಇವರೇ ಅವರು ಎಂದು ತಿಳಿಯದು. ಮಾದರಸ ಮಾದಲಾಂಬಿಕೆಯರ ಹೊಟ್ಟೆ ಯಲ್ಲಿಯೇ ಹುಟ್ಟಬೇಕೇನು? ಅದು ಹೇಗೆ ಸಾಧ್ಯ? ಸಂತರಿಗೆ, ಶರಣರಿಗೆ, ಋಷಿಗಳಿಗೇನು ಕೊರತೆ ಇದೆ? ಆದರೆ ಅವರೇ ಇವರು ಎಂದು ನೋಡುವಷ್ಟು ತಿಳಿಯಾದ ಕಣ್ಣಿಲ್ಲ! ತಿಳಿಯಾದ ಹೃದಯ ಇಲ್ಲ! ಹೃದಯದ ದ್ವೇಷ, ಮಾತ್ಸರ್ಯ, ಹುಸಿ ತೆಗೆದುಹಾಕಿ ಭಗವಂತನತ್ತ ನೋಡಿಬಿಟ್ಟರೆ ನಿರ್ವಿಶೇಷ ಭಗವಂತನ ದರ್ಶನ ಉಂಟಾಗುತ್ತದೆ! ಶರಣರ ನುಡಿಗಳ ಸಹಾಯ ಬೇಕು ಇದಕ್ಕೆ! ಶ್ರೇಷ್ಠರ ಮಾತುಗಳನ್ನು ಬಳಸಿ ನಮ್ಮ ಮನೆಯನ್ನು, ಮನಸ್ಸನ್ನು ಸ್ವಚ್ಛಗೊಳಿಸಿಕೊಂಡಿರುವುದು. ಯಾವಾಗ ಸ್ವಚ್ಛತೆ ಆಯಿತೋ, ಒಳಗೆ ಹೃದಯ ನಿರ್ಮಲ ಆಯಿತೋ, ಆ ಕ್ಷಣಕ್ಕೆ ಅಲ್ಲಿರುವ ಜೀವ ನಿರ್ವಿಶೇಷಗೊಳ್ಳುತ್ತದೆ. ಆ ನಿರ್ವಿಶೇಷತೆಯ ಮಧ್ಯ ಅಖಂಡತೆಯ ಭಾನ ಬರುತ್ತದೆ. ಆ ಅಖಂಡತೆಯೇ ಭಗವಂತ ! ಇಂತಹ ಒಂದು ಭಗವತ್ ಅವತರಣ ನಮ್ಮ ಮನಸ್ಸಿನಲ್ಲಿ ಉಂಟಾಗುವುದಕ್ಕಾಗಿ ಈ ಚಿಂತನ.

✪

## ಸಜ್ಜನರ ಸಂಗ

ಅಯ್ಯಾ ಸಜ್ಜನ ಸದ್ಭಾವದ ಸಂಗದಿಂದ
ಮಹಾನುಭಾವರ ಕಾಣಬಹುದಯ್ಯ
ಮಹಾನುಭಾವರ ಸಂಗದಿಂದ
ಗುರು-ಲಿಂಗ-ಜಂಗಮ
ಪ್ರಸಾದವನರಿಯಬಹುದು
ಅದು ಕಾರಣ ಸದ್ಭಕ್ತರ ಸಂಗವನ್ನೇ ಕರುಣಿಸು.

## ಚೆಂದ

ಸಿದ್ಧಗಂಗೆಯ ನೋಟ ಚೆಂದ
ಸಿದ್ಧಗಂಗೆಯ ವಾತಾವರಣ ಚೆಂದ
ಸಿದ್ಧಗಂಗೆಯ ತ್ರಿವಿಧ ದಾಸೋಹಿಯನು
ನೋಡಲು ಇನ್ನೂ ಚೆಂದ
ಸಿದ್ಧಗಂಗೆಯಲಿ ವೇದ ಸಂಸ್ಕೃತವನ್ನು
ಓದಲು ಬಂದ ಮಕ್ಕಳ ನೋಡಲು ಚೆಂದ
ಪರಮಪೂಜ್ಯ ಶ್ರೀ ಶಿವಕುಮಾರ ಶ್ರೀಗಳ ಜ್ಞಾನ,
ವೈರಾಗ್ಯ ಚೆಂದವೇ ಚೆಂದ.

**– ಗಂಗಾಧರ ಸ್ವಾಮಿ ಹೆಚ್.**
೨ನೇ ವರ್ಷದ ಬಿ.ಕಾಂ.
ಶ್ರೀ ಸಿದ್ಧಗಂಗಾ ಪದವಿ ಮಹಾವಿದ್ಯಾಲಯ
ತುಮಕೂರು-೫೭೨ ೧೦೩.





# ಸ್ಫೂರ್ತಿಯ ಸೆಲೆ ವಂದೇಮಾತರಂ

– ಡಾ. ಎಂ. ಚಿದಾನಂದಮೂರ್ತಿ *

*ಪಾಶ್ಚಾತ್ಯರು ತಮ್ಮ ರಾಷ್ಟವನ್ನು* **'Native Country'** *ಎಂದು ಕರೆದುಕೊಂಡರೆ ಭಾರತೀಯರು 'ಮಾತೃಭೂಮಿ' ಎಂದೇ ಕರೆಯುತ್ತಾರೆ. ಅಂತಹ ಮಾತೃಭೂಮಿಯನ್ನು ಬಂಕಿಂ ಚಂದ್ರರು ಆರಾಧ್ಯದೈವ 'ದುರ್ಗಾ' ಎಂಬಂತೆ ಭಾವಿಸಿ ಸ್ತೋತ್ರ ಮಾಡಿದ್ದಾರೆ. ಅವಳು 'ಸುಜಲಾ', 'ಸುಫಲಾ' – 'ಸುಮಧುರ ಭಾಷಿಣಿ'– ಖಡ್ಗ ಹಿಡಿದಿರುವ ಶತ್ರು ಸಂಹಾರಕಳು) ಇದು ನಮ್ಮ ರಾಷ್ಟಗೀತೆ ನಮಗೆ ನೀಡುವ ನೇರಸಂದೇಶ.*

**ಭಾ**ರತಕ್ಕೆ ಸ್ವಾತಂತ್ರ್ಯ ದೊರಕಿದ(೧೫-೦೮-೧೯೪೭) ಬಳಿಕ ೨೬-೦೧-೧೯೫೦ರಂದು ರವೀಂದ್ರ ನಾಥ ಠಾಗೋರರ 'ಜನಗಣಮನ ಅಧಿನಾಯಕ ಜಯಹೇ। ಭಾರತ ಭಾಗ್ಯವಿಧಾತ' ಮತ್ತು ಬಂಕಿಂ ಚಂದ್ರರ 'ವಂದೇ ಮಾತರಂ' ಕವನಗಳನ್ನು ಭಾರತದ ಅಧಿಕೃತ ಗೀತಗಳೆಂದು ಸಂವಿಧಾನವು ಒಪ್ಪಿಕೊಂಡು ಒಂದನ್ನು 'National Anthem' ಎಂದೂ ಇನ್ನೊಂದನ್ನು 'National Song' ಎಂದೂ ಗುರುತಿಸಿ, ಎರಡಕ್ಕೂ ಸಮಾನ ಗೌರವ ಸ್ಥಾನ ನೀಡಿತು. ಠಾಗೋರರ ಗೀತವು ಭಾರತೀಯರಿಗೆ ಭಾಗ್ಯ ವನ್ನು ದಯಪಾಲಿಸುವ ದೈವಸ್ತೋತ್ರವಾಗಿದ್ದರೆ, ಬಂಕಿಂ ಚಂದ್ರರ ಗೀತವು 'ಭಾರತಮಾತೆ'ಯ ಸ್ತೋತ್ರಗೀತ. ಇವುಗಳಲ್ಲಿ 'ವಿಧಾತ(ದೈವ)ನಿಗಿಂತ 'ಮಾತೃ'(=ತಾಯಿ) ಹೆಚ್ಚು ಆತ್ಮೀಯ-ಆದ್ದರಿಂದಲೇ ಈಗಲೂ 'ವಂದೇಮಾತರಂ' ನಮ್ಮ ಭಾವನಾತ್ಮಕ ರಾಷ್ಟ್ರಪ್ರೇಮವನ್ನು ಉದ್ದೀಪನ ಗೊಳಿಸುತ್ತದೆ ಅಥವಾ ಪ್ರಜ್ವಲಗೊಳಿಸುತ್ತದೆ. ('ಜನಗಣಮನ' ಬರೆದ ಹಿನ್ನಲೆಯ ಬಗ್ಗೆ ಬೇರೆ ಅಭಿಪ್ರಾಯವೂ ಇದೆ) ಎರಡೂ ಗೀತಗಳು ಬಂಗಾಳಿಯಲ್ಲಿದ್ದರೂ, ಸಂಸ್ಕೃತ ಪದಗಳು ಸಾಕಷ್ಟಿರುವುದರಿಂದ ಅವುಗಳ ಒಟ್ಟು ಆಶಯ ಎಲ್ಲ ಭಾರತೀಯರಿಗೆ ಮನದಟ್ಟಾಗುತ್ತದೆ. ನಾನೇ ಕಂಡಂತೆ ೧೯೪೦-೧೯೪೭ರ ಅವಧಿಯಲ್ಲಿ ಹಳ್ಳಿಗಳಲ್ಲಿ, ನಗರಗಳಲ್ಲಿ 'ವಂದೇಮಾತರಂ' ಉದ್ಘೋಷದೊಡನೆ ಜನರು ಆವೇಶ ದಿಂದ ಸ್ವಾತಂತ್ರ್ಯ ಚಳುವಳಿಯ ಮೆರವಣಿಗೆ ಮಾಡುತ್ತಿದ್ದರು. ಆ ಕಾಲದಲ್ಲಿ ಬ್ರಿಟಿಷ್ ಆಡಳಿತವಿದ್ದುದರಿಂದ ಮೆರವಣಿಗೆ ಯಲ್ಲಿ ಭಾಗವಹಿಸಿದವರನ್ನು ಪೊಲೀಸರು ಲಾಠಿಗಳಿಂದ ಬಡಿಯುತ್ತಿದ್ದರು. ಸ್ವಾತಂತ್ರಪೂರ್ವದಲ್ಲಿ 'ಗುರುದೇವ' ಠಾಗೂರರ ಹೆಸರು ಪ್ರಸಿದ್ಧವಾಗಿದ್ದರೂ ಅವರ 'ಜನಗಣ ಮನ' ಹಾಡು ಪ್ರಸಿದ್ಧವಾಗಿರಲಿಲ್ಲ. ಆಗ ಪ್ರಸಿದ್ಧವಾಗಿದ್ದುದು ಬಂಕಿಂ ಚಂದ್ರರ 'ವಂದೇಮಾತರಂ' ಗೀತೆ ಅಥವಾ 'ವಂದೇಮಾತರಂ' ಘೋಷಣೆ.

ಈಗಿನ ರಾಷ್ಟ್ರಗೀತೆಯು ಬಂಕಿಂಚಂದ್ರರ ಗೀತೆಯ ಮೂಲಪಾಠದ ಸಂಕ್ಷಿಪ್ತ ಪಾಠ. ಅದು ಹೀಗಿದೆ-'**ವಂದೇ ಮಾತರಂ । ಸುಜಲಾಂ ಸುಫಲಾಂ ಮಲಯಜ ಶೀತಲಾಂ ಸಸ್ಯ ಶಾಮಲಾಂ ಮಾತರಂ । ವಂದೇ ಮಾತರಂ ॥ ಶುಭ್ರ ಜ್ಯೋತ್ಸ್ನಾಂ ಪುಲಕಿತ ಯಾಮಿನೀಂ । ಫುಲ್ಲ ಕುಸುಮಿತ ದ್ರುಮದಲ ಶೋಭಿನೀಂ । ಸುಹಾಸಿನೀಂ ಸುಮಧುರ ಭಾಷಿಣೀಂ । ಸುಖದಾಂ ವರದಾಂ ಮಾತರಂ ವಂದೇ ಮಾತರಂ**' ಮೂಲಪಾಠವನ್ನು ಹಾಡಲು ನೂರಿಪ್ಪತ್ತು ಸೆಕೆಂಡುಗಳು ಬೇಕು; ರಾಷ್ಟ್ರಗೀತೆ ಹಾಡಲು ನಲವತ್ತು ಸೆಕೆಂಡುಗಳು ಸಾಕು.

'ವಂದೇ ಮಾತರಂ' ಗೀತವನ್ನು ಬರೆದ ಬಂಗಾಳದ ಬಂಕಿಂಚಂದ್ರ ಚಟ್ಟೋಪಾಧ್ಯಾಯರು (೧೮೩೮-೧೮೯೪ ಒಬ್ಬ ಶ್ರೇಷ್ಠ ಕಾದಂಬರಿಕಾರ, ಅಪ್ಪಟ ದೇಶಪ್ರೇಮಿ ಮತ್ತು ಸಂಸ್ಕೃತಿ ಚಿಂತಕ. ಅವರು ಬ್ರಾಹ್ಮಣ ಕುಟುಂಬದಲ್ಲಿ ಜನಿಸಿ, ಕಲ್ಕತ್ತ ವಿಶ್ವವಿದ್ಯಾಲಯದಿಂದ ಪದವೀಧರರಾದ ಆರಂಭದ ಕೆಲವೇ ವ್ಯಕ್ತಿಗಳಲ್ಲಿ ಒಬ್ಬರು. ಅವರು ಬ್ರಿಟಿಷ್ ಆಡಳಿತದಲ್ಲಿ, ಅವರ ಕೈಕೆಳಗೆ ಡೆಪ್ಯುಟಿ ಮ್ಯಾಜಿಸ್ಟ್ರೇಟ್ ಆಗಿ, ಮುಂದೆ ಡೆಪ್ಯುಟಿ ಕಲೆಕ್ಟರ್ ಆಗಿ ನಿವೃತ್ತರಾದರು. ಅವರ 'ದುರ್ಗೇಶ ನಂದಿನಿ' ಬಂಗಾಳಿ ಭಾಷೆಯ ಮೊದಲ ಕಾದಂಬರಿ. 'ಕಪಾಲ ಕುಂಡಲಿ', 'ಮೃಣಾಲಿನಿ', 'ವಿಷವೃಕ್ಷ', 'ಚಂದ್ರಶೇಖರ', 'ರಾಜಸಿಂಹ' ಜೊತೆಗೆ 'ಆನಂದಮಠ'ದಂತಹ ಹಲವು ಕಾದಂಬರಿಗಳನ್ನು ಬರೆದರು. ಭಗವದ್ಗೀತೆಯ ಬಗ್ಗೆ ವ್ಯಾಖ್ಯಾನ ಬರೆದು ಹಿಂದಿನ ಭಾರತದ ದಾರ್ಶನಿಕರು ತಮ್ಮ ಉದಾತ್ತ ಚಿಂತನೆಗಳಿಂದ ತತ್ತ್ವಜ್ಞಾನವನ್ನು ಬೆಳೆಸಿದ ರೀತಿಯನ್ನು ತೋರಿಸಿ ಭಾರತೀಯರು ಪಾಶ್ಚಾತ್ಯತತ್ತ್ವಗಳಿಗೆ ಜೋತುಬೀಳುವುದನ್ನು ತಪ್ಪಿಸಿದರು. ಸುಧಾರಿತ, ಪುನಶ್ಚೇತನೀಕೃತ, ಶುದ್ಧೀಕೃತ ಹಿಂದೂಧರ್ಮವೊಂದೇ ಭಾರತದ ಪ್ರಗತಿ, ಅಸ್ಮಿತೆಗಳಿಗೆ ಮಾರ್ಗ ಎಂಬುದನ್ನು ತೋರಿಸಿ ಕೊಟ್ಟರು. ('His belief was that there was no serious hope of progress in India except in Hinduism-refined, generated and purified') ಹತ್ತೊಂಭತ್ತನೇ ಶತಮಾನದಲ್ಲಿ ಬ್ರಿಟಿಷರ ಗುಲಾಮಗಿರಿಯಿಂದ ತೀವ್ರ ಕೀಳರಿಮೆ ಅನುಭವಿಸುತ್ತಿದ್ದ ಹಿಂದೂಗಳು ತಮ್ಮ ಲಿಂಗಭೇದ, ಜಾತಿಭೇದ, ಸ್ವಶಾಸ್ತ್ರ

* ನಂ. ೧೦೧೩/ಬಿ, ೬ನೇ ಕ್ರಾಸ್, ೧೧ನೇ ಮೈನ್, ಹಂಪಿನಗರ, ಬೆಂಗಳೂರು-೫೬೦ ೧೦೪.

ಕಲ್ಮಷವನ್ನು ಕಿತ್ತೊಗೆಯುವ ಉದಾತ್ತ ಕನಸನ್ನು ಕಂಡ ಶ್ರೇಷ್ಠರು. ಬ್ರಿಟಿಷರ ಕೈಕೆಳಗಿನ ಅಧಿಕಾರಿಯಾಗಿದ್ದು ಅವರ ವಿರುದ್ಧ ತಾತ್ತ್ವಿಕವಾಗಿ ಸೆಟೆದುನಿಂತ ಸಮಾಜ ಸುಧಾರಕ ಅವರು. ಅವರು ಬರೀ 'ಸಾಹಿತಿ' ಅಲ್ಲ. 'ನೀತಿಬೋಧಕ'ರೂ ಹೌದು. ತಾವು ಎತ್ತಿ ಹಿಡಿದ ನೈತಿಕತೆಯನ್ನು ಬದುಕಿನಲ್ಲಿ ಬಾಳಿದ ನಿಜವಾದ ದೈವಭಕ್ತ.

೧೮೯೬ರಲ್ಲಿ ರವೀಂದ್ರನಾಥ ಠಾಗೋರರು ಆ ಗೀತವನ್ನು ಕಲ್ಕತ್ತ ಸಾರ್ವಜನಿಕ ಸಭೆಯಲ್ಲಿ ಸ್ವತಃ ತಾವೇ ಹಾಡಿ ಜನರ ಮೆಚ್ಚುಗೆ ಗಳಿಸಿದರು. ೧೯ನೇ ಶತಮಾನದ ಉತ್ತರಾರ್ಧದಲ್ಲಿ 'ವಂದೇ ಮಾತರಂ' ಗೀತೆಯು ದೇಶ ಪ್ರೇಮದ ಕಿಚ್ಚನ್ನೇ ಹಬ್ಬಿಸಿತು. 'ದೇಹ'ಕ್ಕಿಂತ 'ದೇಶ' ಮುಖ್ಯ ಎಂಬುದಕ್ಕೆ ಪ್ರಚೋದನೆ ನೀಡಿತು. ಆಗ ಇಡೀ ಭಾರತವನ್ನು ಗುಲಾಮಗಿರಿಗೆ ತಳ್ಳಿದ್ದ ಬ್ರಿಟಿಷರಿಗೆ ಕಲ್ಕತ್ತವು 'ಇಂಡಿಯ'ದ ರಾಜಧಾನಿಯಾಗಿತ್ತು. (ಮುಂದೆ ರಾಜಧಾನಿ ದೆಹಲಿಗೆ ವರ್ಗ ಆಯ್ತು) ಒಂದೇ ಭಾಗವಾಗಿದ್ದ ಬಂಗಾಳವನ್ನು ಮುಸ್ಲಿಮರ ತುಷ್ಟೀಕರಣಕ್ಕಾಗಿ ಬ್ರಿಟಿಷರು ಇಬ್ಭಾಗ ಮಾಡಿದರು.–(ಅದು ಮುಂದೆ ಮುಸ್ಲಿಮರೇ ಹೆಚ್ಚಾಗಿದ್ದ ಪೂರ್ವ ಬಂಗಾಳ ಅಥವಾ ಈಗಿನ ಬಾಂಗ್ಲಾದೇಶ ಆಯ್ತು) ಅದನ್ನು 'ಪೂರ್ವ ಬಂಗಾಳ' ಎಂದು ಕರೆದರು. ಹಿಂದೂ ಗಳನ್ನು ಮುಸ್ಲೀಮರನ್ನು ಒಡೆದು ಆಳುವ ಬ್ರಿಟಿಷರ ನೀತಿ ಅದು. (Divide and Rule) ೧೯೦೫ರಲ್ಲಿ 'ವಂಗ ಭಂಗ' ಚಳುವಳಿಯಲ್ಲಿ 'ವಂದೇ ಮಾತರಂ' ಘೋಷಣೆಯು ಜನಸ್ತೋಮದಿಂದ ಅನುರಣಿಸಿತು, ಆಗಿನ ಬ್ರಿಟಿಷ್ ಗವರ್ನರ್ ಕರ್ಜನ್ ಹೇಳಿದ್ದು– 'ಹಿಂದೂಗಳು ಮುಸ್ಲಿಮರೂ ನನಗೆ ಹೆಂಡಿರಂತೆ, ಆದರೆ ಎರಡನೆಯ ಹೆಂಡತಿ ಹೆಚ್ಚು ಪ್ರಿಯ' ಸಿಸ್ಟರ್ ನಿವೇದಿತಾ ಕೆಲವು ವಿರೋಧಗಳ ನಡುವೆಯೂ ಕಲ್ಕತ್ತ ಕಾಂಗ್ರೆಸ್ ಅಧಿವೇಶನ ದಲ್ಲಿ ನಿರ್ಣಯ ಮಂಡಿಸಿದರು. ಅಲ್ಲಿ 'ವಂದೇಮಾತರಂ' ಬರಹವಿದ್ದ ತ್ರಿವರ್ಣ ಧ್ವಜವನ್ನು ಅಂಗೀಕರಿಸಲಾಯ್ತು. ೧೮೯೬ರಲ್ಲಿ ಕಲ್ಕತ್ತದ ಸಾರ್ವಜನಿಕ ಸಭೆಯಲ್ಲಿ ಪಂ. ವಿಷ್ಣು ಪಲಸ್ಕರರು ಅದನ್ನು 'ಕಾಪಿ' ರಾಗದಲ್ಲಿ ಹಾಡಿದರು. ೧೯೩೮ರಲ್ಲಿ ಬ್ಯಾರಿಸ್ಟರ್ ಮಹಮ್ಮದಾಲಿ ಜಿನ್ನಾ ಮುಸ್ಲಿಂ ಲೀಗ್ ಅಧ್ಯಕ್ಷರಾಗಿದ್ದಾಗ ಅದನ್ನು ತೀವ್ರವಾಗಿ ವಿರೋಧಿ ಸಿದರು. ಮೊದಲಿನಿಂದ್ದ ಅನೇಕ ಮುಸ್ಲಿಮರು ಆ ಹಾಡು ತಮ್ಮ ಧರ್ಮದ 'ಶೆರಿಯತ್' ಕಾನೂನಿಗೆ ವಿರೋಧವಾಗಿದೆ ಯೆಂದೇ ಹೇಳಿ ಅದನ್ನು ವಿರೋಧಿಸುತ್ತಲೇ ಬಂದರು. ಭಾರತವನ್ನು 'ತಾಯಿ' ಎಂದು ಭಾವಿಸಿ ಅವಳನ್ನು ದುರ್ಗಾ ದೇವಿಯ ಪ್ರತಿಬಿಂಬವೆಂಬಂತೆ ಚಿತ್ರಿಸಿರುವುದರಿಂದ ಅಲ್ಲಾನನ್ನು ಬಿಟ್ಟು ಮೂರ್ತಿರೂಪದ ಯಾವುದೇ ದೈವವನ್ನು ವಂದಿಸುವುದಕ್ಕೆ 'ಶೆರಿಯತ್' ಕಾನೂನು ಅಡ್ಡಿ ಎಂಬುದು ಅವರ ವಾದ. ಅವರಿಗೆ ಆಗ ಜವಾಹರ್‌ಲಾಲ್ ನೆಹರು ಬೆಂಬಲವಿತ್ತು ಎಂದು ಹೇಳಲು ಆಧಾರಗಳಿವೆ. ಅಂತಹ ಗೀತವು ೨೪-೦೧-೧೯೫೦ರಲ್ಲಿ 'ರಾಷ್ಟ್ರಗೀತೆ'ಯೆಂದು ಸಂವಿಧಾನದಿಂದ ಮಾನ್ಯತೆ ಪಡೆಯಿತು–ಆಗಲೂ ಪ್ರಧಾನಿಯಾಗಿದ್ದ ನೆಹರು ಅವರಿಗೆ ಅದಕ್ಕೆ ಸಮ್ಮತಿಯಿರಲಿಲ್ಲ. ಈಗಲೂ ಭಾರತದ ಬಹುತೇಕ ಮುಸ್ಲಿಮರು ಅದನ್ನು ಮಾನ್ಯ ಮಾಡುವುದಿಲ್ಲ. ಮೂರು ವರ್ಷಗಳ ಹಿಂದೆ ಬೆಂಗಳೂರಿನ ಕೆಲವು ಮುಸ್ಲಿಮರು ಅದನ್ನು ಹಾಡಲು ನಿರಾಕರಿಸಿದಾಗ ನಾನು ನೊಂದು, ರಾಷ್ಟ್ರಧ್ವಜ ಹಿಡಿದಿರುವ ಭಾರತಮಾತೆಯ ಚಿತ್ರದ ಕೆಳಗೆ 'ವಂದೇಮಾತರಂ' ಘೋಷಣೆ ಇರುವ ಎದೆಬಿಲ್ಲೆಗಳನ್ನು ಮಾಡಿಸಿ ಹಲವರಿಗೆ ಹಂಚಿದೆ– ಈಗಲೂ ಅದನ್ನು ಎದೆಯ ಮೇಲೆ ಧರಿಸುತ್ತೇನೆ. ಅದು ನನ್ನ ಹೃದಯಾಳದ ರಾಷ್ಟ್ರಪ್ರೇಮದ ಹೊರಗಿನ ಸಂಕೇತ.

ರಾವಣನನ್ನು ಕೊಂದು ಲಂಕೆಯಲ್ಲೇ ಉಳಿಯಲು ಬಯಸಿದ ಲಕ್ಷ್ಮಣನಿಗೆ ಶ್ರೀರಾಮ ಹೇಳಿದ್ದು– 'ಅಪಿ ಸ್ವರ್ಣ ಮಯೀ ಲಂಕಾ ನ ಮೇ ಲಕ್ಷ್ಮಣ ರೋಚ್ಯತೇ। ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಲಂಕೆಯು ಸ್ವರ್ಣಮಯಿ ಆಗಿದ್ದರೂ ನನಗೆ ನನ್ನ ಜನ್ಮಭೂಮಿಯೇ ಸ್ವರ್ಗಕ್ಕಿಂತ ಪ್ರಿಯ. ಇದು ಎಲ್ಲ ರಾಷ್ಟ್ರಾಭಿಮಾನಿಗಳಿಗೂ ಅನ್ವಯವಾಗುವ ಮಾತು. ಪಾಶ್ಚಾತ್ಯರು ತಮ್ಮ ರಾಷ್ಟ್ರವನ್ನು 'Native Country' ಎಂದು ಕರೆದುಕೊಂಡರೆ ಭಾರತೀಯರು 'ಮಾತೃಭೂಮಿ' ಎಂದೇ ಕರೆಯುತ್ತಾರೆ. ತಂದೆಗಿಂತ ತಾಯಿಯು ಮಕ್ಕಳಿಗೆ ಹೆಚ್ಚು ಹತ್ತಿರ. ಆತ್ಮೀಯಳು. ಅಂತಹ ಮಾತೃಭೂಮಿಯನ್ನು ಬಂಕಿಂ ಚಂದ್ರರು ಆರಾಧ್ಯದೈವ 'ದುರ್ಗಾ' ಎಂಬಂತೆ ಭಾವಿಸಿ ಸ್ತೋತ್ರ ಮಾಡಿದ್ದಾರೆ. ಅವಳು 'ಸುಜಲಾ', 'ಸುಫಲಾ' – ನಮಗೆ ನೀರನ್ನು(ಹಾಲು), ಆಹಾರವನ್ನು ಕೊಟ್ಟು ಸಾಕು ತ್ತಿರುವವಳು, ಅವಳು 'ಸುಮಧುರ ಭಾಷಿಣಿ'– ಅವಳ ಮಾತು ಹಿತ, ಪ್ರಿಯ, ಹಾಗೆಯೇ ಅವಳು ಖಡ್ಗ ಹಿಡಿದಿರುವ 'ರಿಪುಬಲವಾರಿಣಿ' (ಶತ್ರು ಸಂಹರಕಳು) ಇದು ನಮ್ಮ ರಾಷ್ಟ್ರಗೀತೆ ನಮಗೆ ನೀಡುವ ನೇರಸಂದೇಶ. ತಾಯಿಯು ಮಕ್ಕಳಿಗಾಗಿ ಯಾವ ತ್ಯಾಗಕ್ಕೂ ಸಿದ್ಧ; ತಾವೂ ತಾಯಿಯ ರಕ್ಷಣೆಗೆ ಕಟಿಬದ್ಧರಾಗಿರಬೇಕು.

'ನನ್ನ ಮಾತೆ ಭಾರತ । ನನ್ನ ಒಡಲು ಕನ್ನಡ । ನನ್ನ ರಕ್ತ ಹಿಂದೂ ಎಂಬ ತ್ರಿನೇತ್ರ ಹೆಮ್ಮೆ ನನ್ನದು'– 'ವಂದೇ ಮಾತರಂ' ಕೇಳಿದಾಗಲೆಲ್ಲ, ನೆನಪಾದಾಗಲೆಲ್ಲ ಭಾರತ ಮಾತೆಯ ಹೆಮ್ಮೆಯ ಪುತ್ರನಾದ ನನ್ನ ರಕ್ತದ ಕಣಕಣದಲ್ಲೂ 'ನಾನೊಬ್ಬ ಹಿಂದೂ', ಎಂಬ ಭಾವನೆ ಉಕ್ಕುತ್ತದೆ. ವ್ಯಂಗ್ಯ, ಅಳುಕು, ಭಯವಿಲ್ಲದೆ ನಾನು ಉದ್ಘೋಷಿಸಬಯಸುತ್ತೇನೆ– ಅನ್ಯಮತ ದ್ವೇಷವಿಲ್ಲದ ನಾನು ಒಬ್ಬ ನಿಜವಾದ 'ಹಿಂದೂ' 'ಹಿಂದೂ' – ಎಲ್ಲ ಬಗೆಯ ತ್ಯಾಗಕ್ಕೂ ಸಿದ್ಧವಾಗಿರುವ 'ಹಿಂದೂ' ಮುಂದಿನ ಜನ್ಮದಲ್ಲೂ ನಾನು ಹಿಂದುವೇ'.

❀





# ಅರಿವೇ ವಿಜಯದಶಮಿ

– ನರಸಿಂಹ ಪ್ರಭು

*ಸಾಕ್ಷಾತ್ಕಾರವೆಂದರೆ ಐದು ಕರ್ಮೇಂದ್ರಿಯ ಮತ್ತು ಐದು ಜ್ಞಾನೇಂದ್ರಿಯಗಳ ಮೇಲೆ ವಿಜಯ ಸಾಧಿಸು ವುದಾಗಿದೆ. ಅಂತಹ ಅರಿವೇ ವಿಜಯದಶಮಿ. ಅದುವೇ ಮಾನವ ವಿಕಾಸದ ಉತ್ಸವ.*

ದಸರಾ ಅಥವಾ ದಶ ಹರ ಅಂದರೆ ದಶಹರನನ್ನು ಸೋಲಿಸಿದ್ದು. ವಿಜಯದಶಮಿಯ ದಿನ ರಾವಣನ ಪ್ರತಿಮೆಯನ್ನು ಸುಟ್ಟು ಹಾಕುತ್ತಾರೆ. ರಾವಣ ಅಂದರೆ ಅಸುರ ಎಂದು ರಾವಣನ ಪ್ರತಿಮೆಯನ್ನು ಸುಟ್ಟುಹಾಕುವುದು ಎಂದರೆ ಹತ್ತು ತಲೆಯ ರಾಕ್ಷಸನನ್ನು ವಿನಾಶ ಮಾಡುವ ಸಂಕೇತ. ಹತ್ತು ತಲೆಯ ದೈತ್ಯ ಎಂದರೆ ಏನು ? ಅದು ನಮ್ಮ ಹತ್ತು ಇಂದ್ರಿಯಗಳಾದ ಐದು ಕರ್ಮೇಂದ್ರಿಯ ಮತ್ತು ಐದು ಜ್ಞಾನೇಂದ್ರಿಯಗಳ ಮೂಲಕ ಕಾರ್ಯ ನಿರ್ವಹಿಸುತ್ತಿರುವ ನಮ್ಮ ಅಹಂ. ಪ್ರಪಂಚದಲ್ಲಿ ಇರುವು ದೆಲ್ಲವನ್ನೂ ದೋಚಿಕೊಳ್ಳಬೇಕು ಎನ್ನುವ ಮನೋ ಭಾವನೆಯೇ ನಮ್ಮ ಕ್ಷೋಭೆಗೆ ಕಾರಣ.

ನಮ್ಮ ಅಹಂ ನನಗೆ ಇನ್ನೂ ಬೇಕು ಮತ್ತೂ ಬೇಕು ಎಂದು ಹೇಳುತ್ತದೆ. ಅಹಂಕಾರದ ವಿನಾಶವೇ ದಸರಾ. ಇದನ್ನು ವಿಜಯದಶಮಿ ಎಂದು, ಸರ್ವೋತ್ಕೃಷ್ಟ ವಿಜಯ ಎಂದು, ಇದೇ ಸಾಕ್ಷಾತ್ಕಾರ ಎಂದು ಹೇಳಲಾಗಿದೆ. ಒಂಭತ್ತು ದಿನ ನವರಾತ್ರಿ ಹಾಗು ಹತ್ತನೇ ದಿನ ವಿಜಯದಶಮಿ ನಮ್ಮ ಸಾಕ್ಷಾತ್ಕಾರದ ಪ್ರಕ್ರಿಯೆಯ ಸಂಕೇತ. ಪ್ರಾರ್ಥನೆಯ ಮೂಲಕ ನಕಾರಾತ್ಮಕ ಗುಣಗಳಿಂದ ಹೊರಬಂದು ಸಕಾರಾತ್ಮಕ ಗುಣಗಳನ್ನು ಅಳವಡಿಸಿಕೊಂಡು ನಿಜವಾದ ಜ್ಞಾನವನ್ನು ಪಡೆದು ಸಾಕ್ಷಾತ್ಕಾರವನ್ನು ಪಡೆಯಬೇಕು. ದಸರಾದ ಹತ್ತು ದಿನವು ಪೂರ್ತಿಯಾಗಿ ಸಾಕ್ಷಾತ್ಕಾರದ ಬಗ್ಗೆ. ಇದನ್ನು ಕಥೆಯ ರೂಪದಲ್ಲಿ ದೇವಿಮಹಾತ್ಮೆಯಲ್ಲಿ ಹೇಳಲಾಗಿರುವುದನ್ನು ಅಧ್ಯಾತ್ಮಿಕ ದೃಷ್ಟಿಕೋನದಿಂದ ನೋಡೋಣ.

***ಮಾನವ ವಿಕಾಸದ ಉತ್ಸವ :***

ವಿಜಯದಶಮಿ ಎಂದರೆ ಏನು ಎಂದು ತಿಳಿಯಲು ನವರಾತ್ರಿಯ ಬಗ್ಗೆ ಸಂಕ್ಷಿಪ್ತವಾಗಿ ತಿಳಿಯುವುದು ಅವಶ್ಯ. ನವರಾತ್ರಿ ಎಂದರೆ ಒಂಭತ್ತು ರಾತ್ರಿಗಳು, ನವರಾತ್ರಿ ಎಂದರೆ ಹೊಸ ರಾತ್ರಿ ಎಂದು ಸಹ. ನವ ಎಂದರೆ ಒಂಭತ್ತು ಮತ್ತು ನವ ಎಂದರೆ ಹೊಸದು ಎಂದು ಸಹ ಅರ್ಥ. ದಸರಾ ಎಂದರೆ ಸೋಲಿಸಲ್ಪಟ್ಟ ಹತ್ತು ಎಂದು.

'ಯಾ ದೇವಿ ಸರ್ವ ಭೂತೇಷು ನಿದ್ರಾರೂಪೇಣ ಸಂಸ್ಥಿತಾ...' ಇಲ್ಲಿ ನಿದ್ರೆ ಎನ್ನುವುದು ಉನ್ನತ ಪ್ರಜ್ಞೆಯ ನರ್ತನ. ಅದು ಎಚ್ಚರ ಸ್ಥಿತಿ. ಕನಸಿನ ಸ್ಥಿತಿ. ಹಸಿವಿನ ಅವಸ್ಥೆಯಾಗಿರ ಬಹುದು. ಈ ನರ್ತನದ ಉತ್ಸವವೇ ನವರಾತ್ರಿ.

'ಯಾ ನಿಶಾ ಸರ್ವಭೂತಾನಾಂ' ಎನ್ನುತ್ತದೆ ಭಗವದ್ಗೀತೆ. ಅಂದರೆ ಒಬ್ಬ ಜ್ಞಾನಿಗೆ ಯಾವುದು ರಾತ್ರಿಯೋ ಅದು ಅಜ್ಞಾನಿಗೆ ಹಗಲು; ಒಬ್ಬ ಜ್ಞಾನಿಗೆ ಯಾವುದು ಹಗಲೋ ಅದು ಅಜ್ಞಾನಿಗೆ ರಾತ್ರಿ. ರಾತ್ರಿ ಎಂದರೆ ನಾವು ಏನನ್ನು ನೋಡಲು ಆಗದ ಹೊತ್ತು ಎಂದು. ನಾವು ಪ್ರಪಂಚವನ್ನು ನೋಡಿ ಅದನ್ನು ಸತ್ಯ ಎಂದು ತಿಳಿಯುತ್ತೇವೆ ಆದರೆ ಒಬ್ಬ ಜ್ಞಾನಿಗೆ ಈ ಪ್ರಪಂಚ ನಿಜವಲ್ಲ. ಹಾಗಾಗಿ ಜ್ಞಾನಿಗೆ ಇದು ಕತ್ತಲು. ಆದರೆ ಒಬ್ಬ ಜ್ಞಾನಿ ನೋಡುವ ಆತ್ಮದ ಬೆಳಕು ಅಜ್ಞಾನಿಗೆ ಕತ್ತಲು ಕಾರಣ ಅವನು ಅದನ್ನು ನೋಡಲು ಸಾಧ್ಯವಾಗುತ್ತಿಲ್ಲ. ನವರಾತ್ರಿ ಎಂದರೆ ಒಂಭತ್ತು ದಿನಗಳ ಎಚ್ಚರದ ಸ್ಥಿತಿಯಲ್ಲಿ ಇದ್ದು ಹತ್ತನೇ ದಿನ ದಶ ಹರಾ ಹತ್ತನ್ನು ಗೆಲ್ಲುವ ದಿನ ವಿಜಯದಶಮಿ. ವಿಜಯದಶಮಿ ಎಂದರೆ ಐದು ಕರ್ಮೇಂದ್ರಿಯ ಮತ್ತು ಐದು ಜ್ಞಾನೇಂದ್ರಿಯಗಳ ಮೇಲೆ ವಿಜಯವನ್ನು ಸಾಧಿಸುವ ದಿನ. ಇದು ಮಾನವನ ವಿಕಸನದ ಉತ್ಸವ.

***ಮಹಿಷ ಎಂದರೆ ಅಜ್ಞಾನ :***

ದೇವಿಮಹಾತ್ಮೆಯಲ್ಲಿ ಮಹಿಷಾಸುರನ ಬಗ್ಗೆ ಹೇಳಿದ್ದರೆ, ದೇವಿಯು ಮಹಿಷಾಸುರಮರ್ದಿನಿಯಾಗಿ ಆ ಅಸುರನನ್ನು ಸಂಹಾರ ಮಾಡಿದಳು. ಮಹಿಷಾಸುರ ಎಮ್ಮೆಯ ತಲೆ, ಕೋಣದ ತಲೆಯನ್ನು ಹೊಂದಿರುವ ಅಸುರ ಎಂದು, ಎಮ್ಮೆಯ ತಲೆ ಎಂದರೆ ನಮ್ಮ ಅಜ್ಞಾನದ ಸಂಕೇತ. ನಿತ್ಯಜೀವನದಲ್ಲಿ ಎಷ್ಟೋ ಜನರನ್ನು ಈ ಸ್ಥಿತಿಯಲ್ಲಿ ಇರುವುದನ್ನು ಕಾಣುತ್ತೇವೆ. ಏನು ಹೇಳಿದರು, ಎಷ್ಟು ವಿಧವಾಗಿ ಹೇಳಿದರು ಅವರ ತಲೆಯಲ್ಲಿ ಇಳಿಯುವುದಿಲ್ಲ. ಯಾರಾದರು ಎಮ್ಮೆಯನ್ನು ಹೊಡೆದರೆ, ಆ ಎಮ್ಮೆಯೂ ಓಹೋ

ಯಾರೋ ಯಾರಿಗೋ ಎಲ್ಲೋ ಹೊಡೆಯುತ್ತಿದ್ದಾರೆ ಎಂದಷ್ಟೇ ಭಾವಿಸುತ್ತದೆ. ಹೀಗೆ ಹೊಡೆಯುವಿಕೆ ಪದೇ ಪದೇ ಪುನರಾವರ್ತನೆಯಾದಾಗ ಮಾತ್ರ ಆ ಹೊಡೆತ ತನಗೇ ಎಂದು ಅರ್ಥ ಮಾಡಿಕೊಳ್ಳುತ್ತದೆ. ಓಡಲು ಪ್ರಾರಂಭಿಸುತ್ತದೆ. ಅಂದರೆ ಎಮ್ಮೆಗೆ ಯಾವುದೇ ವಿಷಯ ಅರ್ಥ ಮಾಡಿಕೊಳ್ಳಲು ಬಹಳ ಸಮಯ ಹಿಡಿಯುತ್ತದೆ. ಮಹಿಷಾ ಎಂದರೆ ಇದೆ.

ಜೀವನದಲ್ಲಿ ಎಷ್ಟೋ ತೊಂದರೆಗಳನ್ನು ನಮಗೆ ಬೇರೆಯವರಿಂದ ಎಂದು ತಿಳಿದಿದ್ದೇವೆ. ನಿತ್ಯ ಜೀವನದಲ್ಲಿ ಹಗಲು ರಾತ್ರಿ ನಮಗೆ ಗಂಡ-ಹೆಂಡತಿ, ಯಜಮಾನ, ಅತ್ತೆ-ಮಾವನಿಂದ ನಾವು ಹೊಡೆತಕ್ಕೆ ಈಡಾಗುತ್ತೇವೆ. ನಾವು ಎಮ್ಮೆಯ ತರಹ ಆಲೋಚಿಸುತ್ತಾ ಮುಂದೆ ಸಾಗುತ್ತೇವೆಯೇ ಹೊರತು ನಮ್ಮನ್ನು ನಾವು ಸರಿಪಡಿಸಿಕೊಳ್ಳಲು ಯತ್ನಿಸುವುದಿಲ್ಲ, ಸುಧಾರಿಸುವುದಿಲ್ಲ. ಅಂತಹ ಅಜ್ಞಾನವನ್ನು ನಾಶ ಮಾಡುವವಳೇ ಮಹಿಷಾಸುರಮರ್ದಿನಿ.

***ಆರಾಧನೆಯ ಹಿಂದಿನ ಸಂದೇಶ :***

ನವರಾತ್ರಿಯ ಮೊದಲ ಮೂರು ದಿನ ಮಹಾಕಾಳಿಯನ್ನು ನಂತರ ಮೂರು ದಿನ ಮಹಾಲಕ್ಷ್ಮಿಯನ್ನು ಮತ್ತು ಕೊನೆಯ ಮೂರು ದಿನ ಮಹಾಸರಸ್ವತಿಯನ್ನು ಪೂಜಿಸುತ್ತೇವೆ. ಮಹಾಕಾಳಿಯ ಪ್ರಜ್ಞಾಶಕ್ತಿ ಕಾರ್ಯ ನಿರ್ವಹಣೆಗೆ ಹಾಗೂ ನಾಶಕ್ಕೆ. ಜೀವನದಲ್ಲಿ ಮೊದಲು ನಾಶವಾಗಬೇಕಾದ್ದು ನಕಾರಾತ್ಮಕ ಗುಣಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ ಹಾಗೂ ಮಾತ್ಸರ್ಯ. ಮಹಾಕಾಳಿ ಈ ನಕಾರಾತ್ಮಕ ಗುಣಗಳನ್ನು ನಾಶಮಾಡುತ್ತಾಳೆ.

ನಕಾರಾತ್ಮಕ ಗುಣಗಳು ನಾಶವಾದ ಮೇಲೆ ನಾವು ಸಕಾರಾತ್ಮಕ ಗುಣಗಳನ್ನು ಅಳವಡಿಸಿಕೊಂಡು ಅದನ್ನು ಅಭಿವೃದ್ಧಿಪಡಿಸಲು ನಮಗೆ ಬೇಕಾದ ಆಧ್ಯಾತ್ಮಿಕ ಸಂಪತ್ತು ಹಾಗೂ ಪ್ರಾಪಂಚಿಕ ಸಂಪತ್ತಿಗಾಗಿ ನಂತರ ಮೂರು ದಿನಗಳು ಮಹಾಲಕ್ಷ್ಮಿಯನ್ನು ಪ್ರಾರ್ಥಿಸುತ್ತೇವೆ.

ಪ್ರಾಪಂಚಿಕ ಸಂಪತ್ತುಗಳು ಎಂದರೆ ಧನ, ಧಾನ್ಯ ಸಂತಾನ ಹೀಗೆ, ಅಧ್ಯಾತ್ಮಿಕ ಸಂಪತ್ತು ಎಂದರೆ ಶಮ, ದಮ, ತಿತೀಕ್ಷ, ಉಪರತಿ, ಶ್ರದ್ಧೆ ಮತ್ತು ಸಮಾಧಾನ. ಇದು ಮನಸ್ಸಿಗೆ ಶಾಂತತೆಯನ್ನು ತರುವ ಹಾಗೂ ವಿಕಸನಕ್ಕೆ ಅವಶ್ಯವಾದ ಆಧ್ಯಾತ್ಮಿಕ ಸಂಪತ್ತು. ಈ ಗುಣಗಳನ್ನು ಬೇಡುವುದೇ ಮಹಾಲಕ್ಷ್ಮಿ ಪೂಜೆ.

ಸಕಾರಾತ್ಮಕ ಗುಣಗಳನ್ನು ಅಳವಡಿಸಿಕೊಂಡ ಮೇಲೆ ನಮಗೆ ಬೇಕಾಗಿರುವಂತಹ ಆಧ್ಯಾತ್ಮಿಕ ಜೀವನವನ್ನು ಪಡೆಯಲು ಮಹಾಸರಸ್ವತಿಯನ್ನು ಪ್ರಾರ್ಥಿಸುತ್ತೇವೆ. ಸರಸ್ವತಿ ಎಂದರೆ ಜ್ಞಾನ ಅಥವಾ ವಿದ್ಯೆ. ವಿದ್ಯೆಯಲ್ಲಿ ಎರಡು ವಿಧ. ಪರಾ ಮತ್ತು ಅಪರಾ. ಆತ್ಮಜ್ಞಾನವನ್ನು ಪ್ರತಿನಿಧಿಸುವುದು ಪರಾ ವಿದ್ಯೆ. ಪ್ರಾಪಂಚಿಕ ಜ್ಞಾನವಾದ ವೈದ್ಯಕೀಯ, ಎಂಜಿನಿಯರ್ ಹಾಗೂ ಇತರೆ ಪ್ರಾಪಂಚಿಕ ಜ್ಞಾನವನ್ನು ಪ್ರತಿನಿಧಿಸುವುದು ಅಪರಾ ವಿದ್ಯೆ. ಕೊನೆಯ ಮೂರು ದಿನ ಮಹಾಸರಸ್ವತಿಗೆ ಈ ಎರಡು ವಿದ್ಯೆಗಳಿಗಾಗಿ ಪ್ರಾರ್ಥನೆ.

ಜಗನ್ಮಾತೆಯು ನಮಗೆ ಹೊಸ ಜನ್ಮವನ್ನು ಕೊಡುವ ದಿನವೇ ಮಹಾಲಯ ಅಮಾವಾಸ್ಯೆ. ನಮ್ಮ ಅಜ್ಞಾನವನ್ನು ಲವಲೇಶವೂ ಇಲ್ಲದಂತೆ ನಾಶಮಾಡುವ ಕ್ರಮವೇ ಮಹಾಲಯ. ನಂತರ ಜ್ಞಾನದ ಬೆಳಕನ್ನು ನವರಾತ್ರಿಯಲ್ಲಿ ನೀಡಿ ಹತ್ತನೆಯ ದಿನ ನಮ್ಮ ಅಹಂ ಅನ್ನು ಗೆಲ್ಲುವುದೇ ನಮ್ಮನ್ನು ನಾವು ಗೆಲ್ಲುವ ದಿನವಾದ ವಿಜಯದಶಮಿ.

**ಪತ್ರೆ ವಿನಿಮಯ :** ನವರಾತ್ರಿ ಉತ್ಸವಕ್ಕೂ ಶಮೀವೃಕ್ಷಕ್ಕೂ ಪರಸ್ಪರ ಸಂಬಂಧವಿದೆ. ಮಹಾಭಾರತದಲ್ಲಿ ಅಜ್ಞಾತವಾಸಕ್ಕೆ ಪಾಂಡವರು ತೆರಳುವ ವೇಳೆ ತಮ್ಮ ಆಯುಧಗಳನ್ನು ಶಮೀವೃಕ್ಷದಲ್ಲಿ ಅಡಗಿಸಿಟ್ಟಿದ್ದರು ಎನ್ನಲಾಗುತ್ತದೆ. ಶ್ರೀರಾಮನು ರಾವಣನ ಮೇಲೆ ಯುದ್ಧಕ್ಕೆ ಹೊರಡುವ ಮುನ್ನ ಶಮೀವೃಕ್ಷಕ್ಕೆ ನಮಸ್ಕರಿಸಿ ಮುಂದೆ ತೆರಳಿದನಂತೆ. ಆ ಕಾರಣ, ಬನ್ನಿ ಪತ್ರೆ ವಿನಿಮಯ ಮಾಡಿಕೊಳ್ಳುವಾಗ 'ಶಮೀ ಶಮಯತೇ ಪಾಪಂ। ಶಮೀ ಶತ್ರು ವಿನಾಶನಂ ಅರ್ಜುನಸ್ಯ ಧನುರ್ಧಾರಿ ರಾಮಸ್ಯ ಪ್ರಿಯದರ್ಶನಂ' ಎನ್ನುತ್ತಾರೆ.

*(ಕೃಪೆ : ವಿಜಯ ಕರ್ನಾಟಕ)*

**ಶ್ರೀವಾಣಿ**

ಮಾನವ ಜನ್ಮವನ್ನು ಸಾರ್ಥಕಗೊಳಿಸಲು ಸಾಧಕವಾದದು ಧರ್ಮ. ಈ ಬಗೆಯ ಧರ್ಮದ ಆಚರಣೆ ದಿನ ನಿತ್ಯದ ಜೀವನ ಕ್ರಮವಾಗಬೇಕು. ಧರ್ಮದಿಂದ ಹಣವನ್ನುಗಳಿಸಬೇಕು. ಧರ್ಮಕ್ಕೆ ವಿರುದವಾದ ಗಳಿಕೆ ಅನರ್ಥವಾಗುತ್ತದೆ. ಧರ್ಮ, ಅರ್ಥ ಕಾಮಗಳು ನಮಗೆ ಮುಂದೆ ಸಿಗಬಹುದಾದ ಮೋಕ್ಷಕ್ಕೆ ಸಹಾಯವಾಗಬೇಕು.





# ಗ್ರಾಮೀಣ ಪ್ರದೇಶದಲ್ಲಿ ದೀಪಾವಳಿ ಆಚರಣೆ

– ಎಚ್.ಎಸ್. ಸಿದ್ಧಗಂಗಪ್ಪ *

ಕರ್ನಾಟಕವೂ ಸೇರಿದಂತೆ ಭಾರತದ ಬಹುತೇಕ ಕಡೆಗಳಲ್ಲಿ ಸಂತೋಷ, ಸಂಭ್ರಮ, ಉತ್ಸಾಹ, ಉಲ್ಲಾಸದಿಂದ ಆಚರಿಸುವ ಹಬ್ಬ ದೀಪಾವಳಿ. ಇದನ್ನು ದೀವಳಿಗೆ, ಹಟ್ಟಿ ಹಬ್ಬ, ನೀರು ಕಾಯಿಸುವ ಹಬ್ಬ ಎಂದು ಕರೆಯುವುದುಂಟು. ಕತ್ತಲೆಯನ್ನು ಕಳೆದು ಬೆಳಕನ್ನು ತಂದು ಕೊಡುವ ದೀಪಾವಳಿ ಗ್ರಾಮೀಣರಿಗೆ ಜೀವನೋತ್ಸಾಹವನ್ನು ನೆಮ್ಮದಿ, ಸಂತೋಷವನ್ನು ತಂದುಕೊಡುವ ಹಬ್ಬವಾಗಿದೆ. ಕಣ್ಣಾಯಿಸಿದಷ್ಟು ಕಾಣುವ ಹಚ್ಚ ಹಸಿರಿನಿಂದ ಕೂಡಿದ ಬೆಳೆ, ಕೆರೆ ಕಟ್ಟೆಗಳಲ್ಲಿ ತುಂಬಿ ಹರಿಯುವ ನೀರು ನೋಡಲು ಮನಮೋಹಕ ಹಿನ್ನಲೆಯಿಂದ ದೀಪಾವಳಿಯನ್ನು ದೇವೇಂದ್ರನ ವೈಭೋಗಕ್ಕೆ ಹೋಲಿಸಿ, ಭೂಲೋಕದಲ್ಲಿ ಇಂದ್ರನ ಅಮರಾವತಿಗೂ ಇರುವ ಸಾದೃಶ್ಯವನ್ನು ಅಭಿವ್ಯಕ್ತ ಪಡಿಸಿದ್ದಾರೆ.

*ಹೊಳೆಯಲ್ಲಿ ನೀರು ತುಂಬಿ, ಹೊಲದಲ್ಲಿ ಬೆಳೆತುಂಬಿ*
*ಊರೂರಿನ ಗುಡಿ ಮನೆ ತುಂಬಿ-ದನತುಂಬಿ*
*ದೀವಳಿಗೆ ಬರಲಿ ದಿನ ಬರಲಿ*

ಎಂದು ದೀವಳಿಗೆಯ ಆಗಮನವನ್ನು ಹೃದಯತುಂಬಿ ಸ್ವಾಗತಿಸುತ್ತಾರೆ.

ಕಾರ್ತೀಕ ಮಾಸದಲ್ಲಿ ಬರುವ ದೀವಳಿಗೆ ಹಬ್ಬವನ್ನು ಮೂರು ದಿವಸ ಶ್ರದ್ಧಾಭಕ್ತಿಯಿಂದ ಆಚರಿಸುತ್ತಾರೆ. ವಿಷ್ಣು ಲೋಕಕಂಟಕನಾದ ದುಷ್ಟ ಶಕ್ತಿಯಾದ ನರಕಾಸುರನನ್ನು ಕೊಂದು ಪ್ರಜೆಗಳಿಗೆ ಸಂತೋಷವನ್ನುಂಟು ಮಾಡಿದ ಸವಿ ನೆನಪಿಗಾಗಿ ಮೊದಲ ದಿನ ನರಕಚತುರ್ದಶಿಯನ್ನು ಆಚರಿಸುತ್ತಾರೆ. ಎರಡನೆ ದಿನ ಅಮಾವಾಸ್ಯೆ ಅಂದು ಲಕ್ಷ್ಮೀ ಪೂಜೆ ಮಾಡುತ್ತಾರೆ. ಲಕ್ಷ್ಮಿ ಇಷ್ಟಾರ್ಥಗಳನ್ನು ಕರುಣಿಸುವ ಕಾಮಧೇನು, ಕಲ್ಪವೃಕ್ಷ ಎಂಬ ನಂಬಿಕೆ. ಆಕೆ ಧಾನ್ಯಲಕ್ಷ್ಮಿಯಾಗಿ, ಸಿರಿಲಕ್ಷ್ಮಿಯಾಗಿ, ಭಾಗ್ಯಲಕ್ಷ್ಮಿಯಾಗಿ ಮನೆಯಲ್ಲಿ ಶಾಶ್ವತವಾಗಿ ನೆಲಸುವಂತೆ ಭಕ್ತಿಯಿಂದ ಆರಾಧಿಸುತ್ತಾರೆ.

ಬಲಿಪಾಡ್ಯಮಿ ದಿನ ಬಲಿ ಚಕ್ರವರ್ತಿಯ ದಾನಗುಣವನ್ನು ಕೃತಜ್ಞತೆಯಿಂದ ನೆನೆಯುತ್ತಾರೆ. ಲೋಕಕಲ್ಯಾಣಕ್ಕಾಗಿ ತನ್ನನ್ನೇ ಅರ್ಪಿಸಿಕೊಂಡ ಬಲಿಯ ಉದಾರತೆಯನ್ನು ಮೆಚ್ಚಿ ವಿಶಿಷ್ಟವಾದ ಸ್ಥಾನ ನೀಡಿ ಗೌರವಿಸಿದ್ದಾರೆ. ಅಂದು ಗೋವಿನ ಸಗಣಿಯಲ್ಲಿ ಬಲೀಂದ್ರನ ಮೂರ್ತಿಯನ್ನು ಮಾಡಿ ಹೊಲಗಳಲ್ಲಿ ಬೆಳೆದ ಹೂವು, ತೆನೆಗಳನ್ನಿಟ್ಟು ಭಕ್ತಿ ಯಿಂದ ಪೂಜಿಸುತ್ತಾರೆ. ಸೂರ್ಯಚಂದ್ರರಿರುವ ತನಕ ಬಲೀಂದ್ರನ ನೆನಪು ಜನರ ಹೃದಯ ಸಿಂಹಾಸನದಲ್ಲಿ ನಿರಂತರವಾಗಿರಲೆಂದು ಮನದುಂಬಿ ಹಾರೈಸಿದ್ದಾರೆ. ಇದಕ್ಕೆ ಸಾಂಕೇತಿಕ ಎನ್ನುವಂತೆ ಬಲೀಂದ್ರನ ಜೊತೆಯಲ್ಲಿಯೇ ಸೂರ್ಯ ಚಂದ್ರರನ್ನು ಪೂಜಿಸುತ್ತಾರೆ.

ಈ ಮೂರು ದಿನಗಳೂ ಸಂಜೆ ವೇಳೆ ದನಕರುಗಳು ಮನೆ ಸೇರುವ ವೇಳೆಗೆ ಮನೆಮುಂದೆ ಎಣ್ಣೆದೀಪಗಳನ್ನು ಸಾಲಾಗಿ ಹಚ್ಚುತ್ತಾರೆ. ದನಗಳು ಹಚ್ಚಹಸಿರನ್ನು ಮನಸಾರೆ ಮೇದು ಮೈತುಂಬಿಕೊಂಡು ಮನೆಗೆ ಬರುವ ದೃಶ್ಯ ಕಣ್ಮನಗಳಿಗೆ ಮುದನೀಡುತ್ತದೆ. ಇಂಥ ದನಗಳನ್ನು ನೋಡಿಯೇ ಇರಬೇಕು. 'ದೀವಳ್ಗೇಲಿ ದನ ಕೆಣಕಬ್ಯಾಡ, ಬೇಸಿಗೇಲಿ ಬೆಂಕಿ ಕೆಣಕಬ್ಯಾಡ' ಎಂದಿರಬೇಕು. ಈ ಸಂದರ್ಭದಲ್ಲಿ ಹೋರಿಗಳಿಗೆ ಮೈತೊಳೆದು ಕೊಂಬಿಗೆ ಬಣ್ಣ ಹಚ್ಚಿ ಕೊರಳಿಗೆ ಹಾಗೂ ಕಾಲಿಗೆ ಗೆಜ್ಜೆ ಕಟ್ಟುತ್ತಾರೆ. ಕೆಲವರು ಮೈಗೆಲ್ಲ ಚಿತ್ತಾರದ ಬಣ್ಣ ಹಾಕುವುದೂ ಉಂಟು. ಕೊರಳು, ಕೊಂಬುಗಳಿಗೆ, ಹೂವನ್ನು ಹಾಕಿ ಸಿಂಗರಿಸುತ್ತಾರೆ. ನಂತರ ಅವುಗಳಿಗೆ ಪೂಜೆ ಮಾಡಿ ಊರಿನ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಯುವಕನೊಬ್ಬ ತನ್ನ ಮನೆಯ ಹೋರಿಗಳ ಬಗ್ಗೆ ಅಭಿಮಾನದಿಂದ ತನ್ನ ಗೆಳೆಯನಿಗೆ

*ಕರಿಯತ್ತ ಕಾಳಿಂಗ ಬಿಳಿಯತ್ತು ಮಾಲಿಂಗ*
*ಸರದಾರ ನನ್ನೆತ್ತು ಸಾರಂಗ-ಬರುವಾಗ*
*ಮನೆಯ ಮಾಳಿಗೆಲ್ಲಾ ನಡುಗ್ಯಾವು ।*

ಎಂದು ಹೇಳುತ್ತಾನೆ.

ಗ್ರಾಮದೇವರ ಗುಡಿಯ ಮುಂದೆ ಉದ್ದವಾದ ಒಂದು ಕಂಬವನ್ನು ನಿಲ್ಲಿಸಿ ತುದಿಯಲ್ಲಿ ಅಡಿಕೆ ಅಥವಾ ಬಿದಿರು

* ನಂ. ೧೬೧೭, 'ಮಾತೃಶ್ರೀ' ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ, ೬ನೇ ಬ್ಲಾಕ್, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧.

ದಬ್ಬೆಯಿಂದ ತ್ರಿಕೋನಾಕಾರವಾಗಿ ಕಟ್ಟಿ ಪ್ರತಿದಿನ ಸಂಜೆ ಕಾರ್ತೀಕಮಾಸ ಮುಗಿಯುವವರೆಗೂ ಎಣ್ಣೆದೀಪ ಹಚ್ಚಿ ಏರಿಸುತ್ತಾರೆ. ಪ್ರತಿದಿನ ರಾತ್ರಿ ದೇವರಿಗೆ ವಿಶೇಷ ಪೂಜೆ, ಪ್ರಸಾದ ಹಂಚಿಕೆ. ಗ್ರಾಮದಲ್ಲಿರುವ ಪ್ರತಿಯೊಂದು ಮನೆಯವರು ಸರದಿಯ ಮೇಲೆ ಪೂಜೆ ಸಲ್ಲಿಸುತ್ತಾರೆ. ಈ ಸಂಪ್ರದಾಯ ಭಾವೈಕ್ಯತೆಯ ಪ್ರತೀಕ.

ದೀಪಾವಳಿ ಹಬ್ಬದಲ್ಲಿ ಹೆಣ್ಣುಮಕ್ಕಳಿಗೆ ಅಳಿಯಂದಿರಿಗೆ, ಅದರಲ್ಲೂ ಹೊಸದಾಗಿ ಮದುವೆಯಾದ ಅಳಿಯನಿಗೆ ವಿಶೇಷ ಆಹ್ವಾನ. ಮನೆಯಲ್ಲಿ ಹಬ್ಬದ ಸಡಗರ. ಈ ಸಂತೋಷದ ಸಂದರ್ಭದಲ್ಲಿ ತವರಿಗೆ ಕರೆಸಿಕೊಳ್ಳುವುದನ್ನು ಮರೆಯಬೇಡ ಎಂದು ತಂಗಿಯೊಬ್ಬಳು ಅಣ್ಣನಿಗೆ

***ಕಾರುಣ್ಣಿಮೆ ಹಬ್ಬಕ ಕರೆಲಾಕ ಮರೀಬ್ಯಾಡ***
***ಕಾಲ ಬಾಡೀಗೆ ಕೊಡಬೇಡಾ–ನನ್ನಣ್ಣ***
***ಹೊನ್ನ ದೀವಳಿಗೆ ಮರಿಬ್ಯಾಡ ।***

ಎಂದು ನೆನಪು ಮಾಡಿಕೊಟ್ಟಿದ್ದಾಳೆ. ಹೆಣ್ಣುಮಕ್ಕಳಿಗೆ ಗೌರಿ ಮತ್ತು ದೀಪಾವಳಿ ಹಬ್ಬಗಳು ಬಹು ಮುಖ್ಯವಾದವು. ಈ ಹಬ್ಬಗಳನ್ನು ತವರು ಮನೆಯಲ್ಲಿ ಆಚರಿಸುವುದೆಂದರೆ ಅವರಿಗೆ ಬಲು ಹಿಗ್ಗು. ಮನೆ ಮಕ್ಕಳೆಲ್ಲ ಬಣ್ಣಬಣ್ಣದ ಹೊಸ ಬಟ್ಟೆಗಳನ್ನು ತೊಟ್ಟು ಸಂಭ್ರಮದಿಂದ ಓಡಾಡುವ ದೃಶ್ಯ ಮನಮೋಹಕ. ಎಲ್ಲರ ಮನೆಯಲ್ಲಿಯೂ ಬಗೆ ಬಗೆಯ ಸಿಹಿ ಊಟ. ಮುಕ್ತಮನಸ್ಸಿನಿಂದ ಅತಿಥಿಗಳ ಸತ್ಕಾರ. ಇವೆಲ್ಲ ಅವರ ಸಂತೃಪ್ತ ಜೀವನಕ್ಕೆ ಹಿಡಿದ ಕನ್ನಡಿ.

ತುಮಕೂರು, ಬೆಂಗಳೂರು, ಮಂಡ್ಯ ಹಾಗೂ ಹಾಸನ ಜಿಲ್ಲೆಗಳಲ್ಲಿ ಪ್ರಚಲಿತವಿರುವ ಭಾಗವಂತಿಕೆ ಮೇಳ ದೀಪಾವಳಿ ಸಂದರ್ಭದಲ್ಲಿ ನಡೆಯುತ್ತದೆ. ದೀಪಾವಳಿ ೧೫ ದಿನಗಳು ಇರುವಾಗಲೇ ಭಾಗವಂತಿಕೆ ಮೇಳದವರು ಮನೆಮನೆಗೆ ಹೋಗಿ ದವಸ ಧಾನ್ಯಗಳನ್ನು ಸಂಗ್ರಹ ಮಾಡುತ್ತಾರೆ. ಹಾಗೆ ಸಂಗ್ರಹಿಸಿದ ದವಸ ಧಾನ್ಯಗಳನ್ನು ಗ್ರಾಮದ ಹಬ್ಬದಲ್ಲಿ ವಿನಿಯೋಗಿಸುತ್ತಾರೆ. ಹೀಗೆ ದೀವಳಿಗೆ ಸಂದರ್ಭದಲ್ಲಿ ಹಳ್ಳಿಹಳ್ಳಿಗಳಿಗೆ ಹೋಗುವುದಕ್ಕೆ **'ಹಾರಡುವುದು'**, **'ಭಾಗವಂತಿಕೆ ಹೋಗುವುದು'**, **'ಹಿಟ್ಟಿನ ಪಟ್ಟಿ ತಕ್ಕೊಂಡು ಹೋಗುವುದು'** ಎನ್ನುತ್ತಾರೆ. ಇವರಿಗೆ **'ದೀವಳಿಗೆ ದಂಡು'** ಎಂದೂ ಕರೆಯುವುದುಂಟು. ಭಾಗವಂತಿಕೆ ಮೇಳದವರು ಪಟ ತೆಗೆದುಕೊಂಡು ಹೋಗಿ ಗ್ರಾಮದ ದೇವರ ಗುಡಿ ಮುಂದೆ ನಿಲ್ಲಿಸುತ್ತಾರೆ. ಹೀಗೆ ಮಾಡುವುದು ಭಾಗವಂತಿಕೆ ಮೇಳ ಕಟ್ಟಲು ಬರುತ್ತಿದ್ದಾರೆ ಎಂದು ಸೂಚನೆ ಕೊಟ್ಟಂತೆ. ಅವರು ಊರಾಡಲು ಹೋಗುವಾಗ ಕೆಲವು ಕಡೆ ತಮಟೆ ಮತ್ತು ನಗಾರಿ ಬಳಸುವುದುಂಟು. ಭಾಗವಂತಿಕೆ ಮೇಳೆ ಎಂದರೆ ಈ ಊರಿನ ಹೆಣ್ಣುಮಕ್ಕಳಿಗೆ ತಮ್ಮ ತವರಿನವರು ಬಂದ ರೆಂದು ಸಡಗರ.

ಭಾಗವಂತಿಕೆ ಮೇಳದ ಹಾಡುಗಾರರಲ್ಲಿ ಕೆಲವು ಮುಮ್ಮೇಳದವರು, ಕೆಲವರು ಹಿಮ್ಮೇಳದವರಿರುತ್ತಾರೆ. ಪ್ರತಿಯೊಬ್ಬ ಕಲಾವಿದನ ಕೈಯಲ್ಲಿ ಕಂಚಿನ ತಾಳವಿರುತ್ತದೆ. ಮುಮ್ಮೇಳದವರು ಹಾಡಿದ್ದನ್ನು ಹಿಮ್ಮೇಳದವರು ಹಾಡುತ್ತಾರೆ. ತಾಳ ಹಾಕುತ್ತಾ ಹಿಂದೆ ಮುಂದೆ ಹೆಜ್ಜೆ ಹಾಕುತ್ತಾ ಕುಣಿಯುತ್ತಾರೆ. ಮೇಳ ಮುಗಿದ ಮೇಲೆ ಮೇಳದ ತಾಳ ಮತ್ತು ಗೆಜ್ಜೆಗಳನ್ನು ಗುಡಿ ತುಂಬಿಸುತ್ತಾರೆ. ಅಲ್ಲಿಗೆ ಆ ವರ್ಷದ ಭಾಗವಂತಿಕೆ ಮೇಳೆ ಮುಕ್ತಾಯವಾದಂತೆ. ಮತ್ತೆ ಮುಂದಿನ ದೀಪಾವಳಿಗೆ ಅದು ಬಯಲಿಗೆ ಬರುವುದು. ಆದರೆ ಇತ್ತೀಚೆಗೆ ಬೇರೆ ಬೇರೆ ಸಂದರ್ಭಗಳಲ್ಲಿ ಮೇಳ ನಡೆಸುವುದುಂಟು.

ಮಲೆನಾಡಿನ ಕೆಲವು ಭಾಗಗಳಲ್ಲಿ ದೀಪಾವಳಿ ಸಂದರ್ಭದಲ್ಲಿ ಆಚರಿಸುವ ಒಂದು ಆಚರಣೆ **'ಅಂಟಿಕೆ–ಪಂಟಿಕೆ'** ಉತ್ತರ ಕರ್ನಾಟಕದಲ್ಲಿ ಇದನ್ನು **'ಬೆಳಕು ನೀಡುವ ಬಿಂಗಿ'**, **'ಬಿಂಗಿ ಪದ'** ಎಂದೂ ಕರೆಯುತ್ತಾರೆ. ಕಾರ್ತೀಕ ಮಾಸದ ಮೊದಲ ಬಲಿಪಾಡ್ಯಮಿಯಿಂದ ಪ್ರಾರಂಭಿಸಿ, ಕೆಲವು ಕಡೆ ಎರಡು ದಿನಗಳ ಕಾಲ ಮತ್ತೆ ಕೆಲವು ಕಡೆ ಐದು ದಿನಗಳ ಕಾಲ ಅಂಟಿಕೆ ಪಂಟಿಕೆ ಆಚರಣೆ ನಡೆಯುತ್ತದೆ. ಬಲೀಂದ್ರನ ಆರಾಧನೆಗಾಗಿಯೇ ರೂಪುಗೊಂಡಿದೆ ಎಂದು ಹೇಳಲಾಗಿರುವ ಈ ಆಚರಣೆಯ ಹಿನ್ನಲೆಯ ದಂತಕತೆಯ ಪ್ರಕಾರ ***'ಬಲೀಂದ್ರನು ಭೂಮಿಯಲ್ಲಿ ಅವತರಿಸಿ, ತಾನು ಪ್ರತಿ ವರ್ಷವೂ ದೀಪಾವಳಿಯ ಸಂದರ್ಭದಲ್ಲಿ ಭೂಮಿಗೆ ಬರುವುದಾಗಿಯೂ ಈ ಅವಧಿಯಲ್ಲಿ ಎಲ್ಲರೂ ತಮ್ಮ ನೋವನ್ನು ಮರೆತು ಸಂತೋಷದಿಂದ ನನ್ನನ್ನು ಸ್ಮರಿಸಿ ಸ್ವಾಗತಿಸಿದರೆ ಅವರ ಇಷ್ಟಾರ್ಥಗಳನ್ನು ನೆರವೇರಿಸುವುದಾಗಿಯೂ ವರವನ್ನು ನೀಡಿದ'*** ಎಂಬ ನಂಬಿಕೆಯಿದೆ. ಬಲೀಂದ್ರನ ಅಂಶವು ಲೀನವಾಗಿದೆ ಎಂದು ನಂಬಲಾಗುವ 'ಕೈದೀಪ'ವೊಂದನ್ನು ಹಿಡಿದ ಕಲಾವಿದರು ಮನೆಮನೆಗೆ ಹೋಗಿ ಬಲೀಂದ್ರನ ಸಂದೇಶವನ್ನು ನೆನಪು ಮಾಡಿಕೊಟ್ಟು ಅವನ ಮಹಿಮೆಯನ್ನು ಹಾಡಿ ಹೊಗಳುತ್ತಾರೆ. ಅವರು ಪ್ರತಿಯೊಂದು ಮನೆಯ ಬಾಗಿಲಿಗೆ ಹೋಗುವ ಮುನ್ನ





'ದೀಪಾವಳಿ ದೀಪಾಳ್ಯೋ' ಎಂದು ಕೂಗುತ್ತಾರೆ. ಮನೆಯವರು ಅವರಿಂದ ಹಾಡುಗಳನ್ನು ಹಾಡಿಸಿ ಸಂತೋಷದಿಂದ ಕೈದೀಪಕ್ಕೆ ಎಣ್ಣೆಯನ್ನು ಹಾಕಿ ಪೂಜಿಸಿ ಅಕ್ಕಿ ತೆಂಗಿನಕಾಯಿ ಮೊದಲಾದ ಸೂಕ್ತ ಕಾಣಿಕೆ ನೀಡಿ ಕಳುಹಿಸಿಕೊಡುತ್ತಾರೆ.

ಮನೆಯವರ ಸೂಕ್ತ ಕಾಣಿಕೆ ಪಡೆದ ನಂತರ ಎಲ್ಲರೂ ಎದ್ದು ನಿಂತು ವಂದಿಸಿ ಹೊರಡುತ್ತಾರೆ. ಹೊರಡುವ ಮುನ್ನ ಅಂಗಳದಲ್ಲಿ ನಿಂತು;

***ಹಾಲು ಹಳ್ಳಾಗಲಿ ಬೆಟ್ಟ ಬೆಳ್ಳಾಗಲಿ***
***ಬೆಟ್ಟಕ್ಕೆ ಬಿಟ್ಟ ಕರುಗಳು ತಪ್ಪದೇ ಮನೆಗೆ ಬರಲಿ***
***ದೀಪಾಳಿ ದೀಪಾಳಿ ದೀಪಾಳ್ಯೋ***

ಎಂದು ಹಾಡುತ್ತಾ ಶುಭವನ್ನು ಹಾರೈಸುತ್ತಾರೆ.

ಹೀಗೆ ದೀಪಾವಳಿ ಸಡಗರ ನಮ್ಮ ಜನಪದರ ಹೃದಯ ಮಂದಿರದಲ್ಲಿ ನಂದಾದೀಪವನ್ನು ಬೆಳಗಿಸಿದೆ.

❀

---

## ಮನವಿ

### ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿ

**ಶ್ರೀ ಸಿದ್ಧಗಂಗಾಮಠ, ತುಮಕೂರು–೫೭೨ ೧೦೪.**

ಆತ್ಮೀಯರೇ,

ಶ್ರೀ ಸಿದ್ಧಗಂಗಾಮಠದ ದಾಸೋಹ ಸೇವೆಯ ವಿಶಿಷ್ಟ ಯೋಜನೆಯಾಗಿ ರೂಪುಗೊಂಡದ್ದು **'ಗ್ರಾಮಾಂತರ ಬಸವ ಜಯಂತಿ ಯೋಜನೆ'** ಎಂಬುದನ್ನು ನೀವು ಮನಗಂಡವರಾಗಿದ್ದೀರಿ. ಯೋಜನೆಯ ಯಶಸ್ಸಿಗೆ ಸಹಕರಿಸುತ್ತ ಬಂದವರಾಗಿದ್ದೀರಿ. ೧೯೬೪ರಂದು ಪ್ರಾರಂಭವಾದ ಈ ಯೋಜನೆ ೧೯೭೪ರಿಂದ ಗ್ರಾಮೀಣ ಬಂಧು–ಭಗಿನಿಯರಿಗೆ ಬಸವಣ್ಣನವರ ತತ್ವಾದರ್ಶಗಳನ್ನು ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನದ ಮೂಲಕ ಪರಿಚಯಿಸುತ್ತ ಬಂದಿರುವುದು ನಿಮಗೆ ತಿಳಿದಿರುವುದೇ ಆಗಿದೆ. ಪರಮಪೂಜ್ಯ ಶ್ರೀ ಶ್ರೀಗಳವರ ಸಂಕಲ್ಪಕ್ಕೆ ಸಾಕಾರಗೊಳ್ಳುತ್ತ ನಡೆದಿರುವುದಾಗಿದೆ. ನೂರು ಉಪನ್ಯಾಸಗಳಿಗಿಂತ ಒಂದು ನಾಟಕದ ಪ್ರದರ್ಶನ ಪರಿಣಾಮದಾಯಕವಾದುದೆಂಬುದನ್ನು ತಿಳಿದು ಪರಮಪೂಜ್ಯ ಶ್ರೀ ಶ್ರೀಗಳು ಈ ಯೋಜನೆಗೆ ವಿಶೇಷ ಮಹತ್ವವನ್ನು ನೀಡಿದರು. ಇದರಿಂದಾಗಿ ಶ್ರೀಮಠ ಜನಸಾಮಾನ್ಯರ ಬಳಿಗೇ ಹೋದಂತಾದುದದಲ್ಲದೆ, ಗ್ರಾಮೀಣರ ಸಮಸ್ಯೆಗಳಿಗೂ ದಾರಿ ತೋರುವಂತಾಯಿತು. ಇದೆಲ್ಲಾ ನಿಮ್ಮ ಸಹಕಾರದಿಂದಾಯಿತು. ನಿಮ್ಮ ಸೇವೆ ಸ್ಮರಣೀಯ.

ಇದೀಗ ಈ ಯೋಜನೆ ಪ್ರಾರಂಭವಾಗಿ ಐವತ್ತು ವರ್ಷಗಳು ತುಂಬುತ್ತಿದ್ದು ಒಂದು ಸಾವಿರ ನಾಟಕಗಳನ್ನು ಪ್ರದರ್ಶಿಸುವಂತಾದುದು ಹೆಮ್ಮೆ ಪಡುವಂತಾದುದಾಗಿದೆ. ನೀವು ನಾಟಕದಲ್ಲಿ ಪಾತ್ರ ವಹಿಸುವುದರ ಮೂಲಕ/ ರಂಗಸಜ್ಜಿಕೆ ನಿರ್ಮಿಸುವುದರ ಮೂಲಕ/ ವಾದ್ಯಗೋಷ್ಠಿಗಳಲ್ಲಿ ಪಾಲ್ಗೊಳ್ಳುವುದರ ಮೂಲಕ/ ವರ್ಣಾಲಂಕಾರ, ವಸ್ತ್ರಾಲಂಕಾರ ಮಾಡುವುದರ ಮೂಲಕ ಸಹಕರಿಸಿರುತ್ತೀರಿ. ಶ್ರೀಗಳವರ ಸಂಕಲ್ಪಕ್ಕೆ ಸಾಕಾರವಾಗಿರುತ್ತೀರಿ. ಪರಮಪೂಜ್ಯ ಶ್ರೀ ಶ್ರೀಗಳವರ ಅಪ್ಪಣೆಯ ಮೇರೆಗೆ ಮುಂದಿನ ವರ್ಷ ಯೋಜನೆಯ ಸಂಬಂಧವಾಗಿ ಸ್ಮರಣಸಂಚಿಕೆಯನ್ನು ಹೊರತರುವುದರ ಮೂಲಕ ಸಮಾರಂಭವನ್ನು ಆಯೋಜಿಸ ಬೇಕಾಗಿರುತ್ತದೆ. ಆದುದರಿಂದ ನೀವು ಈ ಪತ್ರ ತಲುಪಿದ ಒಂದು ತಿಂಗಳಿನೊಳಗಾಗಿ ದಿನಾಂಕ ೭–೧೨–೨೦೧೪ಕ್ಕೆ ಮೀರದಂತೆ ನಾಟಕದಲ್ಲಿ ನೀವು ವಹಿಸುತ್ತಿದ್ದ ಪಾತ್ರ, ವರ್ಷ, ನಿಮ್ಮ ಅನುಭವಗಳನ್ನು ಕುರಿತು ಎರಡು ಪುಟಗಳಿಗೆ ಮೀರದಂತೆ, ನಿಮ್ಮ ಪೂರ್ಣ ವಿಳಾಸ ಹಾಗೂ ಚರವಾಣಿ ಸಂಖ್ಯೆಯೊಂದಿಗೆ 'ವ್ಯವಸ್ಥಾಪಕರು, ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿ, ಶ್ರೀ ಸಿದ್ಧಗಂಗಾ ಮಠ, ತುಮಕೂರು–೫೭೨ ೧೦೪' ಈ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ವಿನಂತಿಸುತ್ತೇವೆ. ತಮ್ಮ ಪಾಸ್‌ಪೋರ್ಟ್ ಸೈಜಿನ ಭಾವಚಿತ್ರ ಮತ್ತು ಮೊಬೈಲ್ ಸಂಖ್ಯೆಯನ್ನು ಕಳುಹಿಸಿಕೊಡಲು ವಿನಂತಿ.

ತಮ್ಮ ವಿಶ್ವಾಸಿಗಳು
**ಪಿ.ಎನ್. ಚಂದ್ರಶೇಖರಯ್ಯ**
**ಹೆಚ್.ವಿ. ವೀರಭದ್ರಯ್ಯ**

# ಬಲಿಪಾಡ್ಯಮಿ

- ಯು.ಎನ್. ಸಂಗನಾಳಮಠ *

ಯಾವಾಗ ಧರ್ಮ ವಿನಾಶದ ಅಂಚನ್ನು ತಲುಪಿ ಅಧರ್ಮ ತಾಂಡವವಾಡುತ್ತದೆ. ಆಗ ನಾನು ಧರ್ಮವನ್ನು ಪುನರ್‌ಸ್ಥಾಪಿಸಲು ಮತ್ತೆ ಮತ್ತೆ ಅವತಾರ ಎತ್ತಿ ಬರುತ್ತೇನೆ ಎಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ. ಅಧರ್ಮದ ವಿರುದ್ಧ ಧರ್ಮ ಜಯಗಳಿಸಿದ ಸಂಕೇತವಾಗಿ ದೀಪಾವಳಿ ಯನ್ನು ಆಚರಿಸಲಾಗುತ್ತದೆ. ಆಶ್ವಯುಜ ಮಾಸದ ಕೊನೆಯಲ್ಲಿ, ಕಾರ್ತೀಕ ಮಾಸದ ಆರಂಭದಲ್ಲಿ ದೀಪಾವಳಿ ಆಚರಣೆ ಆರಂಭವಾಗುತ್ತದೆ. ಮೊದಲದಿನ ಧನ ತ್ರಯೋದಶಿ ಅಥವಾ ಧನ ತೇರಾಸ್ ಈ ೧ಶಿನೆಯ ದಿನದಂದು ಹೊಸವಸ್ತುಗಳ, ವಾಹನಗಳ ಖರೀದಿಗೆ ಪ್ರಶಸ್ತ ದಿನ. ಚತುರ್ದಶಿಯಂದು ಶ್ರೀಕೃಷ್ಣ ನರಕಾಸುರನನ್ನು ಕೊಂದು ಅವನ ಸೆರೆಯಲ್ಲಿದ್ದ ಹದಿನಾರು ಸಾವಿರ ಸ್ತ್ರೀಯರನ್ನು ಬಂಧಮುಕ್ತಗೊಳಿಸಿದ್ದಕ್ಕೆ ನರಕಚತುರ್ದಶಿ ಎನ್ನುವರು. ಇದು ಅಸುರೀಶಕ್ತಿಗಳ ನಿರ್ನಾಮದ ದಿನ. ಅಭ್ಯಂಗ ಸ್ನಾನ, ಸಾಲು ದೀಪಗಳ ಸಂಭ್ರಮ ಈ ದಿನದ ವಿಶೇಷ. ಶ್ರೀರಾಮನು ರಾವಣನನ್ನು ಸಂಹರಿಸಿ ಅಯೋಧ್ಯೆಗೆ ಮರಳಿದ ದಿನ ಎಂಬ ಉಲ್ಲೇಖವೂ ಇದೆ. ಮರುದಿನ ದೀಪಾವಳಿ ಅಮಾವಾಸ್ಯೆ ಲಕ್ಷ್ಮೀಪೂಜೆಗೆ ಪ್ರಶಸ್ತದಿನ. ಶ್ರೀಕೃಷ್ಣನ ಪೂರ್ಣಾವತಾರವಾದ ದಿನ. ಕಠೋಪನಿಷತ್ತಿನ ನಚಿಕೇತನಿಗೆ ಆತ್ಮಸಾಕ್ಷಾತ್ಕಾರವಾದ ದಿನ. ಅಂತರಂಗವನ್ನು ಅರಿಯುವ ಜ್ಞಾನ ದೀಪದ ದಿನ.

ಕಾರ್ತೀಕ ಶುದ್ಧ ಪ್ರತಿಪದೆಯ ದಿನ ಬಲಿಪಾಡ್ಯಮಿ ದಿನ. ಈ ಆಚರಣೆ ಹಿಂದೆ ರೋಚಕ ಕಥೆ ಇದೆ. ಇದು ವಿಷ್ಣುವಿನ ದಶಾವತಾರಗಳಲ್ಲಿ ಒಂದಾದ ವಾಮನನ ಹುಟ್ಟಿಗೆ ಕಾರಣ. ರಾಕ್ಷಸ ಕುಲದಲ್ಲಿ ಜನಿಸಿದರೂ ಬಲಿಚಕ್ರವರ್ತಿ ವಿಷ್ಣುವಿನ ಪರಮಭಕ್ತ. ಪ್ರಹ್ಲಾದ ಪುತ್ರನಾದ ವಿರೋಚನನ ಮಗನಾದ ಬಲಿ ತ್ರಿಲೋಕದಲ್ಲಿ ತನ್ನ ಸಾರ್ವಭೌಮತ್ವ ಸ್ಥಾಪಿಸಬೇಕೆಂಬ ಇಚ್ಛೆ ಹೊಂದಿ, ಬ್ರಹ್ಮನನ್ನು ಕುರಿತು ತಪಗೈದು ವರ ಹೊಂದುತ್ತಾನೆ. ಬಲಿಯಲ್ಲಿ ಅನೇಕ ಸದ್ಗುಣಗಳಿದ್ದವು. ಅವುಗಳಲ್ಲಿ ದಾನ ಒಂದು. ಅದಕ್ಕೆ ಅತಿ **ದಾನಾತ್ ಬಲಿಃ ಬದ್ಧಃ ಅತಿ ಸರ್ವತ್ರ ವರ್ಜಯೇತ್** ಎಂಬ ಮಾತು ಪ್ರಸಿದ್ಧವಾಗಿದೆ.

ಬಲಿ ವಿಶ್ವಜಿತ್ತೆಂಬ ಯಾಗವನ್ನು ಮಾಡಿ ಅಗ್ನಿಯ ಮೂಲಕ ರಥಾಶ್ವಧ್ವಜಗಳನ್ನು, ತನ್ನ ಪಿತಾಮಹನಾದ ಪ್ರಹ್ಲಾದನಿಂದ ದಿವ್ಯಧನುಸ್ಸನ್ನು, ಅಕ್ಷಯ ತೂಣೀರಗಳನ್ನು, ವಶಮಾಡಿ ಕೊಂಡು ಅಶ್ವಮೇಧಯಾಗ ಮಾಡತೊಡಗಿದ. ಇಂದ್ರನಿಗೆ ಸರಿಸಮಾನವಾಗಿ ಬೆಳೆದು ತನ್ನ ಸಾಮ್ರಾಜ್ಯವನ್ನು ಹದಿನಾಲ್ಕು ಲೋಕಗಳಲ್ಲಿ ವಿಸ್ತರಿಸಿದ. ದೇವೇಂದ್ರನ ಅಮರಾವತಿಯನ್ನು ವಶಮಾಡಿಕೊಂಡನು. ಆಗ ದೇವತೆಗಳು ತಮ್ಮ ಗುರು ಬೃಹಸ್ಪತಿಯ ಮೊರೆ ಹೋಗಲು, ಅವರ ಸಲಹೆಯ ಪ್ರಕಾರ ವಿಷ್ಣುವಿನ ಪ್ರಾರ್ಥನೆ ಮಾಡಿದರು. ಬಲಿಚಕ್ರವರ್ತಿ ದೇವತೆಗಳ ಅಧಿಕಾರಕ್ಕೆ ಕಂಟಕ ವಾಗಿದ್ದನೇ ಹೊರತು ಪ್ರಜಾಪೀಡಕನಾಗಿದ್ದಿಲ್ಲ. ಇಂಥವನನ್ನು ಅಸ್ತ್ರ-ಶಸ್ತ್ರಗಳಿಂದ ಸಂಹರಿಸಲು ಸಾಧ್ಯವಿರಲಿಲ್ಲ. ಅದಕ್ಕಾಗಿ ವಿಷ್ಣು ಅದಿತಿ ದೇವಿಯಲ್ಲಿ ವಾಮನರೂಪದಿಂದ ಅವತರಿಸಿದನು. ಈಗಾಗಲೇ ಬಲಿಚಕ್ರವರ್ತಿ ಅಶ್ವಮೇಧಯಾಗದಲ್ಲಿ ಕೇಳಿದವರಿಗೆ ಕೇಳಿದ್ದನ್ನು ಕೊಡುವ ಸಂಕಲ್ಪ ಮಾಡಿದ್ದನು. ಅದಕ್ಕೆ ಮಹಾದಾನಿಯಾದ ಬಲಿಯ ಬಳಿ ಬರುವ ವಾಮನ ತನ್ನ ದಿವ್ಯ ತೇಜಸ್ಸು ಜ್ಞಾನಭರಿತ ಮಾತುಗಳಿಂದ ಚಕ್ರವರ್ತಿಯನ್ನು ಪ್ರಭಾವಗೊಳಿಸಿ, ಏನು ಬೇಕಾದರೂ ದಾನ ಕೊಡಬಲ್ಲೆ ಎಂದ. ಬಲಿಯ ಹತ್ತಿರ ಮೂರು ಪಾದದಷ್ಟು ಜಾಗವನ್ನು ದಾನವಾಗಿ ಕೊಡು ಎಂದು ಕೇಳಿದ. ದಾನ ನೀಡಲು ಬಲಿ ಸಿದ್ಧನಾದಾಗ ಕುಲಗುರು ಶುಕ್ರಾಚಾರ್ಯರು ಅದನ್ನು ತಡೆಯುತ್ತಾರೆ. ಇದು ದೇವತೆಗಳ ಕುತಂತ್ರ ಎಂದು ಎಚ್ಚರಿಸುತ್ತಾರೆ. ಆದರೆ ಬಲಿ ತನ್ನ ನಿರ್ಧಾರದಿಂದ ಅಚಲನಾಗಲಿಲ್ಲ. ದಾನದ ಸಂಕಲ್ಪ ಮಾಡಿದಾಗ ವಾಮನ ಮಹಾತ್ರಿವಿಕ್ರಮನಾದನು. ತನ್ನ ಮೊದಲ ಪಾದದಿಂದ ಇಡೀ ಭೂಮಂಡಲ ಎರಡನೇ ಪಾದದಿಂದ ಆಕಾಶವನ್ನು ಆಕ್ರಮಿಸಿಕೊಂಡು ತನ್ನ ಮೂರನೇ ಪಾದಕ್ಕೆ ಜಾಗ ತೋರಿಸು ಎಂದಾಗ ಬಲಿ ತಲೆಯ ಮೇಲಿಡುವಂತೆ ಕೇಳಿಕೊಂಡಾಗ, ವಾಮನನು ತನ್ನ ಮೂರನೆಯ ಹೆಜ್ಜೆಯನ್ನಿಟ್ಟು, ಬಲಿಯನ್ನು ಪಾತಾಳಕ್ಕೆ ತಳ್ಳುತ್ತಾನೆ. ದಾನ ಪಡೆದ ಭಕ್ತನಿಗೆ ಪ್ರತಿಯಾಗಿ

* ವಿಶ್ರಾಂತ ಉಪನ್ಯಾಸಕರು, 'ಜ್ಯೋತಿರ್ಲಿಂಗ', ೧ನೇ ತಿರುವು, ಹೈಸ್ಕೂಲ್ ಬಡಾವಣೆ, ಶಿವಮೊಗ್ಗ ರಸ್ತೆ, ಹೊನ್ನಾಳಿ-೫೭೭೨೧೭.





ಜ್ಞಾನದೀಪ ವನ್ನು ಕೊಟ್ಟು ಪಾತಾಳದಲ್ಲಿ ಬೆಳಕನ್ನು ಪ್ರಸಾದಿಸುತ್ತಾನೆ. ಇಂದ್ರಪದವಿ ಹೊಂದುವವರೆಗೆ ಪಾತಾಳದಲ್ಲಿರುವಂತೆ ಹೇಳುವನು. ಪಾತಾಳಕ್ಕೆ ಹೋಗುವ ಸಮಯದಲ್ಲಿ ಬಲಿಯು ವಾಮನನನ್ನು ಕುರಿತು, ಪ್ರತಿವರ್ಷ ಒಂದು ದಿನ ಭೂ ಮಂಡಲ ನೋಡಲು ಅವಕಾಶ ಕೊಡು ಎಂದು ಕೇಳುತ್ತಾನೆ. ಹೀಗಾಗಿ ಪ್ರತಿವರ್ಷ ಬಲಿಪಾಡ್ಯಮಿ ಯಂದು ಬಲಿ ಚಕ್ರವರ್ತಿಯ ಸ್ವಾಗತಕ್ಕಾಗಿ ತಳಿರು-ತೋರಣಗಳಿಂದ ಮನೆಗಳನ್ನು ಅಲಂಕರಿಸುತ್ತಾರೆ. ದೀಪಗಳನ್ನು ಬೆಳಗುತ್ತಾರೆ. ಅಜ್ಞಾನ, ಅಹಂಕಾರ ಎಂಬ ಕತ್ತಲನ್ನು ದೂರಮಾಡಲು ದೀಪವನ್ನು ಬೆಳಗಿಸುತ್ತಾರೆ.

ನರಕಚತುರ್ದಶಿಯಿಂದ ಬಲಿಪಾಡ್ಯಮಿಯವರೆಗೆ ಮೂರು ದಿನ ದೀಪ ಬೆಳಗಿದವರು ಮನೆಯಲ್ಲಿ ಮಹಾಲಕ್ಷ್ಮಿ ಸ್ಥಿರವಾಗಿ ನೆಲೆಸುವಳು ಎಂಬ ನಂಬಿಕೆ ಜನಪದರಲ್ಲಿದೆ. ಬಲಿಪಾಡ್ಯಮಿ ದಿನ ಉಜ್ಜಯಿನಿ ರಾಜವಿಕ್ರಮಾದಿತ್ಯ ಸಿಂಹಾಸನವನ್ನೇರಿ ವಿಕ್ರಮಶಕೆ ಆರಂಭಿಸಿದ. ವೈದ್ಯರು ಧನ್ವಂತರಿ ದಿನ ಎಂದು ಆಚರಿಸುವರು. ಜೈನ ತೀರ್ಥಂಕರ ಮಹಾವೀರ ನಿರ್ವಾಣ ಹೊಂದಿದ ದಿನ. ಮಹಾವೀರರ ಪ್ರಮುಖ ಶಿಷ್ಯ ಗೌತಮಸ್ವಾಮಿ ಸಂಪೂರ್ಣ ಜ್ಞಾನ ಪಡೆದ ದಿನ. ಸಿಖ್‌ರ ಆರನೆಯ ಗುರು ಹರ್‌ಗೋವಿಂದ್‌ಸಿಂಗ್‌ರು ತಮ್ಮೊಡನಿದ್ದ ೫೨ ಹಿಂದೂ ರಾಜರುಗಳಿಗೂ ಗ್ವಾಲಿಯರ್ ಕೋಟೆಯಿಂದ ಬಂಧಮುಕ್ತರಾಗಿ ಮೊಘಲ ಸಾಮ್ರಾಟ ಜಹಾಂಗೀರ್ ಒಡ್ಡಿದ ಸವಾಲ್‌ನ್ನು ಗೆದ್ದ ದಿನ. ಅದಕ್ಕಾಗಿ ಸಿಖ್‌ರು ಈ ದಿನವನ್ನು ಬಂಧೀ ಛೋಡ್ ದಿವಸ್ ಎಂದು ಅಮೃತಸರ ಗುರುದ್ವಾರದಲ್ಲಿ ಆಚರಿಸುವರು. ಶ್ರೀಕೃಷ್ಣ ಗೋವರ್ಧನಗಿರಿ ಎತ್ತಿ ಮುಸುಲಧಾರೆಯಿಂದ ಗೋಕುಲ ವಾಸಿಗಳನ್ನು ರಕ್ಷಿಸಿದ ದಿನ. ಆದ್ದರಿಂದ ಈ ದಿನ ಗೋವು ಗಳನ್ನು ಅಲಂಕರಿಸಿ, ಗೋಶಾಲೆಯನ್ನು ದೀಪಗಳಿಂದ ಬೆಳಗಿಸಿ, ಹಸುಗಳಿಗೆ ಅಕ್ಕಿ, ಬೆಲ್ಲ, ತಿಂಡಿ ತಿನಸುಗಳನ್ನು ನೀಡುತ್ತಾರೆ. ಈ ಗೋಪೂಜೆ ದ್ರಾವಿಡ ಪರಂಪರೆಯಿಂದ ಬಂದದ್ದು. ಮನೆಯಲ್ಲಿ ಆವರಣದಲ್ಲಿ ಸಗಣಿಯಿಂದ ಮಾಡಿದ ಪಾಂಡವ ಪೂಜೆ, ಆರ್ಯಪರಂಪರೆಯಿಂದ ಬಂದದ್ದು. ಹೀಗೆ ಆರ್ಯ-ದ್ರಾವಿಡ ಸಂಸ್ಕೃತಿ ಸಮಾಗಮ ವನ್ನು ಕಾಣುವೆವು.

ಅಜ್ಞಾನ, ಅಹಂಕಾರ, ದ್ವೇಷ ಎಂಬುದು ರಾಕ್ಷಸೀ ಸಂಪತ್ತು. ದ್ವೇಷವನ್ನು ಬಿತ್ತಿ ಹಿಂಸೆಯನ್ನು ಬೆಳೆಯುವವರು, ರಾವಣ, ಜರಾಸಂಧ, ಕಂಸ, ಹಿರಣ್ಯಕಶಿಪು, ಸಂತಾನ ದವರು. ಅವರಿಗೆ ಕತ್ತಲು ಎಂದರೆ ಪ್ರೀತಿ. ಅವರಿಗೆ ಬೆಳಕು ಬೇಡ. ಅಂಥ ಕತ್ತಲು ನಮಗೆ ಬೇಡ. ಇಂಥವರು ನಮ್ಮ ಮನೆಯ ಮುಂದೆ, ನಮ್ಮ ಬೀದಿಗಳಲ್ಲಿ ಓಡಾಡದಿರಲಿ ಎಂದು ಅರಿವಿನ ದೀಪ ಹಚ್ಚಬೇಕು. ದ್ವೇಷದ ಕಿಚ್ಚು ಹಚ್ಚ ಬಾರದು ಎಂಬುದೇ ದೀಪಾವಳಿಯ ಸಂಕೇತ ಮತ್ತು ಸಂದೇಶ.

❀

## ಶ್ರೀವಾಣಿ

ಸುಮಾರು ಎಂಟುನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಜನ್ಮತಾಳಿದ ಬಸವಣ್ಣನವರು ಚಿಕ್ಕವಯಸ್ಸಿನಿಂದಲೂ ಉದಾತ್ತ ಮನೋಭಾವವುಳ್ಳವರಾಗಿ ದಿನಚರಿಯ ಸಾಮಾಜಿಕ ಜೀವನದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರಬಲ ಹೋರಾಟ ನಡೆಸಿದ ಧೀಮಂತ ವ್ಯಕ್ತಿ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಶೋಷಣೆ, ಮೇಲು ಕೀಳುಗಳೆಂಬ ಕಲ್ಪನೆ, ದೀನದಲಿತರ ದಮನ ಮುಂತಾದ ಅನ್ಯಾಯಗಳನ್ನು ಹೋಗಲಾಡಿಸಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಶ್ರೇಷ್ಠವಾದ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದು ಅವುಗಳನ್ನು ಅಳವಡಿಸಿಕೊಂಡು ಎಲ್ಲ ವ್ಯಕ್ತಿಯೂ ಉದ್ಧಾರವಾಗುವುದು ಸಾಧ್ಯವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿ ಸಕಲರನ್ನು ಉದ್ಧಾರ ಮಾಡಿದ ಮಹಾತ್ಮ, ಒಟ್ಟಿನಲ್ಲಿ ಶ್ರೇಷ್ಠವರ್ಗದ ಮಾನವತಾವಾದಿಯಾಗಿ ಜಗತ್ತಿನ ಮನುಕುಲದ ಸಮಸ್ಯೆಗಳನ್ನು ಪರಿಹರಿಸಲು ಹೆಣಗಾಡಿದ ಮಹಾನುಭಾವರು ಅವರು.

## ಸಾವಿನೆದುರಿಗೆ ನಿಂತು ಅವರು ನಗುತ್ತಿದ್ದರು ಎಂದರೆ.....

– ನರೇಂದ್ರ ಎಸ್. ಗಂಗೊಳ್ಳಿ

೧೯೩೧ ರ ಮಾರ್ಚ್ ೨೩ರಂದು ಭಗತ್‌ಸಿಂಗ್, ರಾಜಗುರು ಮತ್ತು ಸುಖದೇವ್ ಗಲ್ಲಿಗೇರಲಿದ್ದರು. ಅದರ ಹಿಂದಿನ ದಿನ ಭಗತ್‌ಸಿಂಗ್ ಪರ ವಕೀಲ ಪ್ರಾಣ್‌ನಾಥ್ ಮೆಹ್ತಾ, ಭಗತ್‌ನನ್ನು ಕೊನೆಯದಾಗಿ ಭೇಟಿಯಾದ ಸಂದರ್ಭ. ಮೆಹ್ತಾರನ್ನು ಕಾಣುತ್ತಿದ್ದಂತೆ ಭಗತ್ ಮಂದಹಾಸದೊಂದಿಗೆ ನಮಸ್ಕರಿಸುತ್ತಾ, 'ನಾನು ಹೇಳಿದ 'ದಿ ರೆವಲ್ಯೂಷನರಿ ಲೆನಿನ್' ಪುಸ್ತಕ ತಂದಿದ್ದೀರಾ?' ಎಂದು ಕೇಳಿದ. ಪುಸ್ತಕ ಕೈಗೆ ಬರುತ್ತಿದ್ದಂತೆ ಧನ್ಯವಾದ ಹೇಳಿ ಉಲ್ಲಾಸದಿಂದ ಪುಸ್ತಕ ಓದಲು ಶುರುಮಾಡಿಯೇಬಿಟ್ಟ!

ನಾಳೆ ಗಲ್ಲಿಗೇರುವ ವ್ಯಕ್ತಿ ಹೀಗೆ ಇರಲು ಸಾಧ್ಯವೇ? ಎಂದು ರೋಮಾಂಚನಗೊಂಡ ಮೆಹ್ತಾ, 'ದೇಶಕ್ಕೆ ಏನಾದರೂ ಸಂದೇಶ ನೀಡುತ್ತೀರಾ?' ಎಂದಾಗ ಭಗತ್ ಸಿಂಗ್ ಪುಸ್ತಕದಿಂದ ತಲೆಯೆತ್ತದೆ 'ಸಾಮ್ರಾಜ್ಯಶಾಹಿಗೆ ಧಿಕ್ಕಾರ, ಕ್ರಾಂತಿ ಚಿರಾಯುವಾಗಲಿ– ಈ ಎರಡು ಘೋಷಣೆಗಳನ್ನು ತಿಳಿಸಿ' ಎಂದ. 'ನಿನಗೇನಾದರೂ ಆಸೆ ಇದೆಯಾ?' ಎಂಬ ಮೆಹ್ತಾರ ಪ್ರಶ್ನೆಗೆ, 'ಹೌದು, ಈ ದೇಶದಲ್ಲಿ ಮತ್ತೆ ಹುಟ್ಟುವ ಆಸೆಯಿದೆ; ಮತ್ತೆ ಹುಟ್ಟಿದರೆ ಈ ದೇಶದ ಸೇವೆಮಾಡ ಬಹುದು' ಎಂದಷ್ಟೇ ಉತ್ತರಿಸಿದ ಭಗತ್ ಮತ್ತೆ ಓದುವುದರಲ್ಲಿ ತಲ್ಲೀನನಾದ !

ಗಲ್ಲಿಗೇರುವ ದಿನವೂ, ನೇಣುಗಂಬದ ಹಾದಿಯಲ್ಲಿ ಭಗತ್‌ಸಿಂಗ್ ಗಟ್ಟಿಯಾಗಿ ಕ್ರಾಂತಿ ಕುರಿತಾದ ಭಾಷಣವೊಂದನ್ನು ಮಾಡಿದ. ಉಳಿದ ಕೈದಿಗಳು ರೋಮಾಂಚನಗೊಂಡರು. 'ಸರ್ಫರೋಷ್ ಕಿ ತಮನ್ನಾ', 'ರಂಗ್ ದೇ ಬಸಂತಿ ಚೋಲಾ... ' ಹಾಡುಗಳು ಪ್ರತಿಧ್ವನಿಸಿದವು. ಇಡೀ ಬಂದೀಖಾನೆಯು 'ಇಂಕ್ವಿಲಾಬ್ ಜಿಂದಾಬಾದ್', 'ಹಿಂದುಸ್ತಾನ್ ಅಜಾದ್ ಹೋ' ಘೋಷಣೆಗಳಿಂದ ತುಂಬಿ ಹೋಯಿತು. ಭಗತ್‌ಸಿಂಗ್ ರಾಜಗುರು ಮತ್ತು ಸುಖದೇವ್ ಈ ಮೂವರ ಮುಖದಲ್ಲೂ ಉತ್ಸಾಹ ಮತ್ತು ನಗು. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಕಿಚ್ಚು ಹೊತ್ತಿಸಬಲ್ಲ, ಸ್ಫೂರ್ತಿ ತುಂಬಬಲ್ಲ ಅವರ ವರ್ತನೆಗೆ ಜೈಲಿನ ಅಷ್ಟೂ ಅಧಿಕಾರಿಗಳು ಬೆಚ್ಚಿಬಿದ್ದಿದ್ದರು. ನೇಣಿಗೆ ಕೊರಳೊಡ್ಡುವ ಮುನ್ನವೂ ಆ ಮೂವರ ಮುಖಗಳಿಂದ ನಗು ಮಾಸಿರಲಿಲ್ಲ.

ಇದೆಲ್ಲ ಕಂಡ ಜೈಲಿನ ಅಧಿಕಾರಿ ಚರತ್‌ಸಿಂಗ್ ನಿಬ್ಬೆರಗಾಗಿಹೋಗಿದ್ದ. ಹೀಗೆ ಅಪರಿಮಿತ ಧೈರ್ಯದೊಂದಿಗೆ ನಗುನಗುತ್ತಾ ಗಲ್ಲಿಗೇರಿದ ವ್ಯಕ್ತಿಗಳನ್ನು ತನ್ನ ೩೦ ವರ್ಷಗಳ ವೃತ್ತಿಯವಧಿಯಲ್ಲಿ ಆತ ನೋಡಿರಲೇ ಇಲ್ಲ. ಅವರ ಸಾವು ಅವನನ್ನು ಇನ್ನಿಲ್ಲದಂತೆ ಕಾಡಿತ್ತು.

ಮೊದಲಿಗೇ ಭಗತ್‌ಸಿಂಗ್ ಬಲಿದಾನದ ಬಗ್ಗೆ ಯಾಕೆ ಬರೆಯಬೇಕಾಯಿತೆಂದರೆ, ಇಂದಿಗೂ ಇಂದಿಗೂ ಕೆಲವರು ಆ ಕ್ರಾಂತಿಕಾರಿಯ ತ್ಯಾಗ, ಬಲಿದಾನದ ಬಗ್ಗೆ ಪೂರ್ತಿಯಾಗಿ ಅರಿತುಕೊಳ್ಳದೆ ಸಿನಿಕರಾಗಿ ಮಾತನಾಡುತ್ತಾರೆ; ಅದು ಸಮಸ್ತ ಕ್ರಾಂತಿಕಾರಿಗಳಿಗೆ, ಅವರು ನಡೆಸಿದ ಹೋರಾಟಕ್ಕೆ ಮತ್ತು ನಾವಿಂದು ಅನುಭವಿಸುತ್ತಿರುವ ಸ್ವಾತಂತ್ರ್ಯಕ್ಕೆ ಮಾಡುವ ಅಪಮಾನ. ದೇಶಕ್ಕೆ ಸ್ವಾತಂತ್ರ್ಯ ಬಂದಿದ್ದು ಕೇವಲ ಅಹಿಂಸಾ ಹೋರಾಟದಿಂದ ಅಂತ ಯಾರಾದರೂ ಅಂದುಕೊಂಡಿದ್ದರೆ ಅದಕ್ಕಿಂತ ಮೂರ್ಖತನ ಮತ್ತೊಂದಿಲ್ಲ.

ಭಗತ್ ಆಯ್ದುಕೊಂಡಿದ್ದು ಕ್ರಾಂತಿಮಾರ್ಗವನ್ನು. ತನ್ನ ಮಾರ್ಗದ ಬಗೆಗೆ ಆತನಲ್ಲಿ ಸ್ಪಷ್ಟವಾದ ಅರಿವಿತ್ತು, ನಂಬಿಕೆಯಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಅಚಲವಾದ ಆತ್ಮವಿಶ್ವಾಸ ಮತ್ತು ದೇಶಭಕ್ತಿ ಇತ್ತು. ಭಗತ್‌ನೇ ಹೇಳಿಕೊಂಡಂತೆ, ಕ್ರಾಂತಿಕಾರಿಗಳು ಗಾಂಧೀಜಿಯವರಿಗೆ ಗೌರವ ಕೊಡುತ್ತಾರೆ, ಆದರೆ ಅವರನ್ನು ಅನುಸರಿಸುವುದಿಲ್ಲ. ಅದು ಅಸಾಧ್ಯ ಕೂಡ ಅಗಿತ್ತೆನ್ನಿ. ಗಾಂಧೀಯವರ ಮೃಧುಧೋರಣೆಗಳ ಅಹಿಂಸಾವಾದದ ಬಗೆಗೆ ಭಗತ್‌ಗೆ ನಂಬಿಕೆ ಇರಲಿಲ್ಲ. ಬ್ರಿಟಿಷರು ಭಾರತಕ್ಕೆ ಹೆದರಬೇಕು ಎಂದಾತ ಬಯಸುತ್ತಿದ್ದ. ಅಷ್ಟೇ ಅಲ್ಲ. ತಾನು ಬದುಕಿರುವಷ್ಟು ಕಾಲವೂ ಆ ಉದ್ದೇಶದಲ್ಲಿ ಯಶಸ್ವಿಯೂ ಆದ. ಅಲ್ಲದೆ ಗಾಂಧೀಜಿ ಅಸಹಕಾರ ಚಳುವಳಿ ನಡೆಸಿದಾಗ ಭಗತ್ ಅದನ್ನು ಬೆಂಬಲಿಸಿದ್ದ. ಆದರೆ ಚೌರೀಚೌರಾ ಘಟನೆಯ ಬಳಿಕ ಗಾಂಧೀಜಿ ಅಸಹಕಾರ ಚಳುವಳಿಯನ್ನು ಇದ್ದಕ್ಕಿದ್ದಂತೆ ಹಿಂಪಡೆದದ್ದು ಆತನಿಗೆ ಸರಿಕಾಣಲಿಲ್ಲ. ಮುಖ್ಯವಾಗಿ, ಆ ಪೋಲೀಸರ ವರ್ತನೆಯನ್ನು ಖಂಡಿಸುವ ಒಂದೇ ಒಂದು ಮಾತನ್ನು ಗಾಂಧೀಜಿ ಆಡದಿದ್ದುದು ಭಗತ್‌ಗೆ ಬೇಸರ ತರಿಸಿತ್ತು.

೧೯೨೮ರಲ್ಲಿ ಸೈಮನ್ ಕಮೀಷನ್ ವಿರುದ್ಧದ ಹೋರಾಟಕ್ಕಾಗಿ ಗಾಂಧೀಜಿ ಕರೆಕೊಟ್ಟಾಗ, ತನ್ನ ಸಂಗಡಿಗರೊಂದಿಗೆ ಭಗತ್ ಅದರಲ್ಲಿ ಭಾಗವಹಿಸಿದ್ದ. ಪ್ರತಿಭಟನೆಯ ಮುಂಚೂಣಿಯಲ್ಲಿದ್ದವರು ಲಾಲಾಲಜಪತರಯ್. ಪ್ರತಿಭಟನೆಯನ್ನು ಚದುರಿಸಲು ಬ್ರಿಟಿಷ್ ಪೊಲೀಸ್ ಸೂಪರಿಂಟೆಂಡೆಂಟ್ ಜೆ.ಎ. ಸ್ಕಾಟ್ ಲಾಠಿ–ಚಾರ್ಜ್‌ಗೆ ಆದೇಶಿಸಿದಾಗ, ಜನ ದಿಕ್ಕುಪಾಲಾಗಿ ಓಡಿದ್ದರು. ಮುಂಚೂಣಿಯಲ್ಲಿದ್ದ ಲಾಲಾ ಲಜಪತ್‌ರಾಯ್‌ರ ಮೇಲೇರಿ ಹೋದ ಸ್ಕಾಟ್, ಅವರ ಎದೆಯಿಂದ ರಕ್ತ ಬರುತ್ತಿದ್ದರೂ ಬಿಡದೆ ಲಾಠಿಯಿಂದ ಹೊಡೆಯುತ್ತಲೇ ಇದ್ದ. ಪಂಜಾಬಿನ ಸಿಂಹವೆಂದೇ ಖ್ಯಾತಿ ಪಡೆದಿದ್ದ ಲಜಪತ್‌ರಾಯ್ ೧೮ ದಿನಗಳ ಕಾಲ ಯಾತನೆಯನ್ನು ಅನುಭವಿಸಿ ನಿಧನರಾದರು. ಇದರಿಂದ ಕ್ಷುದ್ಧರಾದ ಭಗತ್ ಮತ್ತು ಸಂಗಡಿಗರು ಇದಕ್ಕೆ ಪ್ರತೀಕಾರವಾಗಿ ಸ್ಕಾಟ್‌ನನ್ನು ಕೊಲ್ಲಲು ನಿಶ್ಚಯಿಸಿದರು. ಸ್ಕಾಟ್‌ನ ಮುಖವನ್ನೇ ನೋಡಿರದಿದ್ದ ಜೈಗೋಪಾಲ್ ಎನ್ನುವ ಕ್ರಾಂತಿಕಾರಿ ನೀಡಿದ ತಪ್ಪು ಸುಳಿವಿನಿಂದಾಗಿ ಸ್ಯಾಂಡರ್ಸ್ ಎನ್ನುವ ಅಧಿಕಾರಿಯನ್ನು ಕೊಲ್ಲಲಾಯಿತು. ಆವತ್ತಿನಿಂದ ಭಗತ್‌ಸಿಂಗ್ ಮತ್ತವನ ಗುಂಪು ಬ್ರಿಟಿಷರ ಪಾಲಿನ ವಾಂಟೆಡ್ ಲಿಸ್ಟ್‌ನಲ್ಲಿ ಸೇರಿತ್ತು.

ಅಂದೊಮ್ಮೆ ಬ್ರಿಟಿಷರು ಸೆಂಟ್ರಲ್ ಅಸೆಂಬ್ಲಿಯಲ್ಲಿ ಕೆಲ ಮಸೂದೆಗಳನ್ನು ಜಾರಿಗೆ ತರಲು ಉದ್ದೇಶಿಸಿದ್ದರು. ಭಾರತೀಯರ ರಾಜಕೀಯ ಚಟುವಟಿಕೆ ಮತ್ತು ಕಾರ್ಮಿಕ್ ಚಟುವಟಿಕೆಗಳನ್ನು ಹತ್ತಿಕ್ಕುವ ಹುನ್ನಾರ ಈ ಮಸೂದೆಗಳ ಹಿಂದಿತ್ತು. ಇದನ್ನು ತೀವ್ರವಾಗಿ ವಿರೋಧಿಸಿದ ಭಗತ್ ಬಳಗ. ಇದರ ವಿರುದ್ಧ ಹೋರಾಟಕ್ಕೆ ಮುಂದಾಯಿತು. ೧೯೨೯ರ ಏಪ್ರಿಲ್ ೮ರಂದು ದೆಹಲಿಯ ಸೆಂಟ್ರಲ್ ಅಸೆಂಬ್ಲಿಯ ಸಭಾಂಗಣದ ನಡುವೆ ಭಗತ್‌ಸಿಂಗ್ ಮತ್ತು ದತ್ ಯಾರಿಗೂ ಅಪಾಯವಾಗದಂತೆ ಎರಡು ಬಾಂಬು ಗಳನ್ನು ಸ್ಫೋಟಿಸುವ ಮೂಲಕ ಸಮಸ್ತ ಬ್ರಿಟಿಷರಲ್ಲಿ ನಡುಕ ಹುಟ್ಟಿಸಿದರು. ಇಬ್ಬರೂ ಸ್ವಯಂ ಇಚ್ಛೆಯಿಂದ ಅದೇ ಸ್ಥಳದಲ್ಲಿ ಶರಣಾದರು. ಅವರು ಮನಸ್ಸು ಮಾಡಿದ್ದರೆ ಅಲ್ಲಿ ನೂರಾರು ಬ್ರಿಟಿಷ್ ಜೀವಗಳನ್ನು ಬಲಿತೆಗೆದುಕೊಳ್ಳ ಬಹುದಿತ್ತು. ಅಲ್ಲಿಂದ ತಪ್ಪಿಸಿಕೊಳ್ಳುವ ಎಲ್ಲಾ ಅವಕಾಶಗಳೂ ಅವರಿಗೆ ಇದ್ದವು. ಆದರೆ ಭಗತ್‌ಗೆ ತಮ್ಮ ಕ್ರಾಂತಿ ಹೋರಾಟದ ಹಿಂದಿನ ಸದಾಶಯವನ್ನು ಎಲ್ಲಾ ಭಾರತೀಯರಿಗೆ ತಲುಪಿಸಬೇಕು ಎಂಬ ಹಂಬಲವಿತ್ತು. ತಮ್ಮನ್ನು ಹಾದಿತಪ್ಪಿದವರು ಎಂದೆಲ್ಲಾ ಜರಿದ ಕೆಲ ಭಾರತೀಯ ನಾಯಕರುಗಳಿಗೆ ತಮ್ಮ ಮನೋಸ್ಥೈರ್ಯ ವನ್ನು ತೋರಿಸಬೇಕಿತ್ತು. ಅದೊಂದೇ ಕಾರಣದಿಂದ ಅವರು ಅಂದು ಶರಣಾಗಿದ್ದರು.

ಭಗತ್‌ಸಿಂಗ್, ರಾಜಗುರು, ಸುಖದೇವ್‌ರನ್ನು ನೇಣಿಗೇರಿಸಿದ ಬಳಿಕ ಜೈಲಿನ ಹೊರಗೆ ಜಮಾಯಿಸಿದ್ದ ಕ್ರಾಂತಿಕಾರಿಗಳಿಗೆ ಹೆದರಿ ಬ್ರಿಟಿಷರು ಜೈಲಿನ ಹಿಂಭಾಗದ ಗೋಡೆಯನ್ನು ಒಡೆಸಿ ಅವರ ಶರೀರಗಳನ್ನು ಟ್ರಕ್ಕಿನಲ್ಲಿ ಸಾಗಿಸಿ, ಸಟ್ಲೆಜ್ ನದಿಯ ದಂಡೆಯ ಮೇಲೆ ದಹಿಸಲು ಪ್ರಯತ್ನಿಸಿದರು. ಅದನ್ನು ತಿಳಿದು ಅಲ್ಲಿಗೆ ದಾಳಿಯಿಟ್ಟ ಕ್ರಾಂತಿಕಾರಿಗಳನ್ನು ಕಂಡೊಡನೆ ಬ್ರಿಟಿಷರು ಪರಾರಿ ಯಾದರು. ಬಲಿದಾನಗೈದ ಮೂರೂ ಕ್ರಾಂತಿಕಾರಿಗಳ ಅಂತ್ಯಸಂಸ್ಕಾರವನ್ನು ಗೌರವದೊಂದಿಗೆ ಲಾಹೋರಿನ ರಾವೀ ನದಿಯ ತೀರದಲ್ಲಿ ಅವರ ಸಹಸ್ರಾರು ಬೆಂಬಲಿಗರ ಉಪಸ್ಥಿತಿಯಲ್ಲಿ ನಡೆಸಲಾಯಿತು. ಇಡೀ ದೇಶ ಶೋಕ ಸಾಗರದಲ್ಲಿ ಮುಳುಗಿತ್ತು. ಗಲ್ಲಿಗೇರಿಸಿದ್ದನ್ನು ವಿರೋಧಿಸಿ ಹರತಾಳ, ಪ್ರತಿಭಟನೆಗಳು ನಡೆದವು. ಅಂಗಡಿ, ಶಾಲಾ–ಕಾಲೇಜುಗಳನ್ನು ಸ್ವಯಂಸ್ಫೂರ್ತಿಯಿಂದ ಬಂದ್ ಮಾಡಲಾಗಿತ್ತು.

ವಾಸ್ತವದಲ್ಲಿ ಭಗತ್‌ಸಿಂಗ್ ಇಡೀ ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಹೊಸದಿಕ್ಕನ್ನು ತೋರಿಸಿದ್ದ. ಭಾರತದ ಸ್ವಾತಂತ್ರ್ಯಕ್ಕೊಂದು ಸ್ವಾಭಿಮಾನದ ಕೆಚ್ಚಿನ ಹಿನ್ನಲೆಯನ್ನು ಒದಗಿಸಿ ಇವತ್ತಿಗೂ ನಾವುಗಳು ಹೆಮ್ಮೆ ಪಡುವಂತೆ, ಯುವಮನಸ್ಸುಗಳು ಪ್ರೇರಣೆ ಪಡೆಯುವಂತೆ ಬದುಕಿದ ಆ ವೀರನಿಗೆ ನಮ್ಮ ನಮನಗಳು.

*(ಕೃಪೆ : ವಿಜಯವಾಣಿ)*

> ಹೆರವರಿಗೆ ಕಲ್ಯಾಣ ಮಾಡುವುದರಲ್ಲಿ ಮಗ್ನರಾದ ಸಜ್ಜನರು ಯಾರೊಡನೆಯೂ ದ್ವೇಷ ಕಟ್ಟಿಕೊಳ್ಳುವುದಿಲ್ಲ. ಚಂದನಗಿಡವನ್ನು ಕೊಡಲಿಯು ಕಡಿದರೂ ಅದು ಕೊಡಲಿಯ ಮೇಲೆ ಸಿಟ್ಟು ಮಾಡದೆ ಅದರ ಮುಖವನ್ನೇ ಸುಗಂಧಮಯ ವಾಗಿ ಮಾಡುವುದು.
>
> – ಭರ್ತೃಹರಿ

# ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಗಾಂಧೀಜಿಯವರ ಕೊಡುಗೆ

– ಯೋಗೀಶ್ ನಿರ್ವಿಕಲ್ಪ *

ಸತ್ಯ ಮತ್ತು ಅಹಿಂಸಾ ತತ್ವಗಳ ಆಧಾರಿತ ವಿಶ್ವ ಶಾಂತಿಯ ಸೌಧ ನಿರ್ಮಿಸುವ ಕನಸು ಕಂಡವರು ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರು. ಅವರು ಮಾನವೀಯ ತತ್ವ ಮೌಲ್ಯಗಳ ಮೂಲಕ ಇಡೀ ಜಗತ್ತನ್ನು ಬೆಸೆಯುವ ಪ್ರಯತ್ನ ಮಾಡಿದವರು. ಭೋಗವೇ ಜೀವನವೆಂದು ಭಾವಿಸಿ ಭೋಗದ ಬೆನ್ನತ್ತಿ ಹೊರಟ ಮಾನವ ಸಮಾಜಕ್ಕೆ ಇವುಗಳಾಚೆ ಬದುಕನ್ನು ಸಾರ್ಥಕ ಪಡಿಸಿಕೊಳ್ಳುವಂತಹ ಮೌಲ್ಯಗಳಿವೆ ಎಂಬುದನ್ನು ಕ್ರಿಯಾತ್ಮಕವಾಗಿ ತೋರಿಸಿಕೊಟ್ಟವರು. ಸತ್ಯ ಹಾಗೂ ಅಹಿಂಸಾ ತತ್ತ್ವಗಳನ್ನು ಬದುಕಿನ ಅವಿಭಾಜ್ಯ ಅಂಗಗಳನ್ನಾಗಿ ಸ್ವೀಕರಿಸಿದ ಅವರು ಕಲ್ಲು ಹೃದಯದ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸತ್ಯ ಮತ್ತು ಅಹಿಂಸೆಯ ಶಾಂತಿ ತತ್ವದ ಪಾಠ ಬೋಧಿಸಿದ ಶ್ರೇಷ್ಠ ಗುರು ಎನಿಸಿಕೊಂಡವರು. ಅರೆ ಬೆತ್ತಲೆಯ ವೇಷದ ಸಂತನಾಗಿ ದೇಶದ ಉದ್ದಗಲಕ್ಕೂ ಸಂಚರಿಸಿದ ಅವರು ದೇಶದ ಜನತೆಯ ನಾಡಿಮಿಡಿತ ಅರಿತವರು. ಭಾರತೀಯರಲ್ಲಿ ದೇಶಾಭಿಮಾನದ ಸಾತ್ವಿಕ ಬೆಳಕನ್ನು ಹೊತ್ತಿಸಿದ ಕೀರ್ತಿ ಅವರದು.

ಗಾಂಧೀಜಿ ಓರ್ವ ಶ್ರೇಷ್ಠ ರಾಜಕೀಯ ಮುತ್ಸದ್ದಿ ಯಾಗಿ, ಶ್ರೇಷ್ಠ ಆಧ್ಯಾತ್ಮ ತತ್ತ್ವದ ಗುರುವಾಗಿ, ಜನನಾಯಕ ರಾಗಿ ಹಾಗೂ ಉದಾತ್ತ ಆದರ್ಶ ತತ್ತ್ವಗಳ ದೇಶಪ್ರೇಮಿ ಯಾಗಿ ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ನೀಡಿದ ಕೊಡುಗೆ ಅಪಾರ ಹಾಗೂ ಅನನ್ಯ. ಜಗತ್ತಿನ ಶ್ರೇಷ್ಠ ವಿಜ್ಞಾನಿ ಐನ್‌ಸ್ಟೀನ್ ತಿಳಿಸುವಂತೆ 'ಗಾಂಧೀಜಿ ಈ ಶತಮಾನದ ಒಂದು ವಿಸ್ಮಯ' ಎನ್ನುವುದರಲ್ಲಿ ಎರಡು ಮಾತಿಲ್ಲ.

ಆಧುನಿಕ ಭಾರತದ ಇತಿಹಾಸವನ್ನು ನಾವು ಅವಲೋಕಿಸಿದಾಗ ಕ್ರಿ.ಶ. ೧೯೧೯ನೇ ವರ್ಷವು ಅತ್ಯಂತ ಮಹತ್ವಪೂರ್ಣ ಮತ್ತು ಸ್ಮರಣೀಯ ವರ್ಷ ಎನಿಸಿಕೊಂಡಿದೆ. ಇದೇ ವರ್ಷ ಗಾಂಧೀಜಿಯವರು ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡು ಅದರ ಸಂಪೂರ್ಣ ನಾಯಕತ್ವವನ್ನು ವಹಿಸಿಕೊಂಡರು. ದೇಶದ ಜನತೆಗೆ ಸತ್ಯ ಮತ್ತು ಅಹಿಂಸೆಯ ವ್ರತ ದೀಕ್ಷೆಯನ್ನು ನೀಡಿದರು. ಕ್ರಿ.ಶ. ೧೯೧೯ ರಿಂದ ಭಾರತ ಸ್ವಾತಂತ್ರ್ಯ ಪಡೆಯುವ ದಿನಗಳವರೆಗೂ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸಿದ ಅವರು ಸ್ವಾತಂತ್ರ್ಯ ಚಳುವಳಿಯ ದಿಕ್ಸೂಚಿಯಾಗಿ ಕಾರ್ಯ ನಿರ್ವಹಿಸಿದರು. ದಿಕ್ಕು ತಪ್ಪಿದ ನಾವೆಗೆ ನಾವಿಕ ಸಿಕ್ಕಿದಂತಾಯಿತು. ಸ್ವಾತಂತ್ರ್ಯ ಹೋರಾಟಗಾರರಲ್ಲಿ ಒಂದು ಹೊಸ ಬೆಳಕು ಮೂಡಿತು. ಹಾಗೆಯೇ ನಮ್ಮ ಸ್ವಾತಂತ್ರ್ಯ ಚಳುವಳಿಗೊಂದು ಹೊಸ ದಿಕ್ಕು ಸಿಕ್ಕಿತು. ಅವರ ಸತ್ಯ, ಅಹಿಂಸೆ ಮತ್ತು ಸತ್ಯಾಗ್ರಹದ ತತ್ತ್ವಗಳು ಬ್ರಿಟಿಷ್ ಸಾಮ್ರಾಜ್ಯವನ್ನು ನಡುಗಿಸಿತು. ಗಾಂಧೀಜಿಯನ್ನು ಜನತೆ ಮೆಚ್ಚಿನ ಜನನಾಯಕರೆಂದು ಸ್ವೀಕರಿಸಿದರು. ಜನತೆ ಅವರು ತೋರಿದ ಆದರ್ಶ ಮಾರ್ಗದಲ್ಲಿ ನಡೆಯಲು ಪ್ರಾರಂಭಿಸಿದರು. ಇದು ಅವರ ಶುದ್ಧ ಅಂತಃಕರಣ ರಾಷ್ಟ್ರಪ್ರೇಮಕ್ಕೊಂದು ಸಾಕ್ಷಿ ಎನ್ನಬಹುದು.

೧೯೧೯ರಿಂದ ೧೯೪೭ರ ಭಾರತೀಯ ಸ್ವಾತಂತ್ರ್ಯ ಹೋರಾಟದ ತೃತೀಯ ಹಂತದ ಕಾಲಾವಧಿಯನ್ನು ಇತಿಹಾಸ ತಜ್ಞರು "ಗಾಂಧೀಯುಗ " ಎಂದೇ ಕರೆದಿದ್ದಾರೆ. ಆ ಮೂಲಕ ಗಾಂಧೀಜಿಯವರು ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಸಲ್ಲಿಸಿದ ಅಮೂಲ್ಯ ಕೊಡುಗೆಗಳನ್ನು ಸ್ಮರಿಸಿಕೊಂಡಿರುವುದು ನಿಜಕ್ಕೂ ಅರ್ಥಪೂರ್ಣ ಎನಿಸಿದೆ. ಗಾಂಧೀಜಿ ತಮ್ಮ ಆಕರ್ಷಕ ಪರುಷ ವ್ಯಕ್ತಿತ್ವದಿಂದ ಭಾರತೀಯರಲ್ಲಿ ಅಹಿಂಸಾ ತತ್ತ್ವದ ಜ್ಯೋತಿಯನ್ನು ಬೆಳಗಿಸಿದ ಶ್ರೇಷ್ಠ ಸಂತರೆನಿಸಿಕೊಂಡಿದ್ದಾರೆ. ಸತ್ಯ–ಅಹಿಂಸೆ ಮತ್ತು ಸತ್ಯಾಗ್ರಹಗಳೆಂಬ ಸಾತ್ವಿಕ ಅಸ್ತ್ರಗಳ ಮೂಲಕ ವಿಶ್ವವನ್ನೇ ಜಯಿಸಬಹುದೆಂಬ ನಿತ್ಯ ಸತ್ಯ ತತ್ತ್ವವನ್ನು ಅವರು ಭಾರತ ಸ್ವಾತಂತ್ರ್ಯ ಹೋರಾಟದ ಮೂಲಕ ಜಗತ್ತಿಗೆ ಸಾಕ್ಷಿಯಾಗಿ ಸಾದರಪಡಿಸಿ ತೋರಿಸಿದರು. 'ಸತ್ಯ–ಅಹಿಂಸೆ–ಸತ್ಯಾಗ್ರಹಗಳೆಂದರೆ ಗಾಂಧೀಜಿ, ಗಾಂಧೀಜಿ ಎಂದರೆ ಸತ್ಯ–ಅಹಿಂಸೆ–ಸತ್ಯಾಗ್ರಹಗಳು' ಎನ್ನುವಂತಹ ಸಾಪೇಕ್ಷತೆ ಅವರಲ್ಲಿ ಕಾಣಬಹುದಾಗಿತ್ತು. ತತ್ತ್ವಾನುಸಂದಾನ ಮತ್ತು ತತ್ವದ ತನ್ಮಯತೆ ಅವರನ್ನು ಒಬ್ಬ ಶ್ರೇಷ್ಠ ಸಂತನ ಸ್ಥಾನದಲ್ಲಿ ಅಲಂಕರಿಸಿತ್ತು.

'ತತ್ವದ ಉಪದೇಶಕ್ಕಿಂತ ತತ್ವದ ಕ್ರಿಯಾತ್ಮಕ ಆಚರಣೆಯೇ ಅತ್ಯಂತ ಪ್ರಭಾವಶಾಲಿ ಹಾಗೂ ಪರಿಣಾಮಕಾರಿ' ಎಂದು ಭಾವಿಸಿದ್ದ ಅವರು ಅದರಂತೆ ನಡೆದರು. ನಡೆದಂತೆ ನುಡಿದ ಅವರ ಶುದ್ಧ ಅಂತಃಕರಣದ ಮಾತೃಪ್ರೇಮ ಪ್ರತಿಯೊಬ್ಬ ಭಾರತೀಯನ ಮನಸ್ಸನ್ನು ಸೆಳೆಯಿತು. ಅವರ ಮಾತೃಪ್ರೇಮದ ಕಕ್ಷೆಯೊಳಗೆ ಪ್ರತಿಯೊಬ್ಬ ಭಾರತೀಯನೂ ಬಂಧಿಯಾಗಿದ್ದು ಶತಮಾನದ ಒಂದು ಅದ್ಭುತ ಪವಾಡ ಎನ್ನುವುದರಲ್ಲಿ ಯಾವುದೇ ಅತಿಶಯವಿಲ್ಲ.

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ – ೫೭೭ ೨೦೨.





ಅಕ್ಟೋಬರ್ ೨, ೧೮೬೯ರಂದು ಗುಜರಾತಿನ ಪೋರ್ ಬಂದರ್‌ನಲ್ಲಿ ಜನಿಸಿದ ಗಾಂಧೀಜಿ ಪೋರ್‌ಬಂದರ್ ಮತ್ತು ರಾಜ್‌ಕೋಟ್‌ನಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರು. ಮುಂದೆ ಕಾನೂನು ಅಧ್ಯಯನಕ್ಕೆ ೧೮೮೮ರಲ್ಲಿ ಇಂಗ್ಲೆಂಡ್‌ಗೆ ತೆರಳಿದ ಅವರು ೧೮೯೧ರಲ್ಲಿ ಮರಳಿ ಭಾರತಕ್ಕೆ ಬಂದು ಮುಂಬೈನಲ್ಲಿ ವಕೀಲ ವೃತ್ತಿಯನ್ನು ಪ್ರಾರಂಭಿಸಿದರು. ೧೮೯೩ರಲ್ಲಿ ಗುಜರಾತಿನ ವ್ಯಾಪಾರಿಯಾಗಿದ್ದ ದಾದಾ ಅಬ್ದುಲ್ಲಾರವರಿಗೆ ಕಾನೂನಿನ ನೆರವು ನೀಡುವ ಸಂಬಂಧ ಅವರು ದಕ್ಷಿಣ ಆಫ್ರಿಕಾಕ್ಕೆ ಪ್ರಯಾಣ ಬೆಳೆಸಿದರು. ಗಾಂಧೀಜಿಯವರ ಬದುಕಿನ ಸತ್ವಪರೀಕ್ಷೆ ಅಂದಿನಿಂದ ಪ್ರಾರಂಭವಾಯಿತು ಎನ್ನಬಹುದು. ದಕ್ಷಿಣ ಆಫ್ರಿಕಾದ ಬಿಳಿಯರ ಸರ್ಕಾರ ಅನುಸರಿಸುತ್ತಿದ್ದ ಅಮಾನುಷ ವರ್ಣಭೇದ ನೀತಿಯನ್ನು ಕಂಡು ಗಾಂಧೀಜಿ ಅಚ್ಚರಿಗೊಂಡರು. ಅಲ್ಲಿನ ಭಾರತೀಯ ದುಃಸ್ಥಿತಿಯನ್ನು ಕಂಡು ನೊಂದರು. ಸುಮಾರು ೨೦ ವರ್ಷಗಳ ಕಾಲ ಅಲ್ಲಿಯೇ ನೆಲೆಸಿ ಅಲ್ಲಿನ ಭಾರತೀಯರ ಪರವಾಗಿ ಅಹಿಂಸಾತ್ಮಕ ಹೋರಾಟ ನಡೆಸಿದರು. ಹೋರಾಟದಲ್ಲಿ ಅಪಾರ ಯಶಸ್ಸು ಕಂಡ ಅವರು ೧೯೧೫ರಲ್ಲಿ ಭಾರತಕ್ಕೆ ಹಿಂತಿರುಗಿದರು. ದಕ್ಷಿಣ ಆಫ್ರಿಕಾದಲ್ಲಿರುವಾಗಲೇ ಅವರು ಮಹಾನ್ ಹೋರಾಟಗಾರ, ಜನಸೇವಕ, ಸತ್ಯ–ಅಹಿಂಸೆ ಹಾಗೂ ಮಾನವೀಯತೆಯ ಪ್ರತಿಪಾದಕ ಎನ್ನುವಂತಹ ಗೌರವ ಮೆಚ್ಚುಗೆಗೂ ಪಾತ್ರರಾಗಿದ್ದರು.

ಅವರು ತಮ್ಮ ರಾಜಕೀಯ ಗುರುಗಳಾದ ಗೋಪಾಲ ಕೃಷ್ಣ ಗೋಖಲೆಯವರ ಮಾರ್ಗದರ್ಶನದಂತೆ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವ ಸಂಕಲ್ಪ ಮಾಡಿದರು. ಅದರಂತೆ ಅವರು ಮೇ ೨೫, ೧೯೧೫ರಲ್ಲಿ ಅಲಹಾಬಾದಿನ ಸಬರಮತಿಯಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿದರು. ದೇಶವ್ಯಾಪಿ ಸಂಚರಿಸಿ ದೇಶದ ಜನತೆಯ ವಸ್ತುಸ್ಥಿತಿಯನ್ನು ಅರಿತರು. ಪ್ರಾದೇಶಿಕ ವಿಷಯ ಸಂಬಂಧೀ ಹೋರಾಟದಲ್ಲಿ ಭಾಗವಹಿಸಿ ಹೋರಾಟವನ್ನು ಯಶಸ್ಸು ಸಹ ಗೊಳಿಸಿದರು. ಇದೇ ಸಂದರ್ಭದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಕಲ್ಕತ್ತೆಯಲ್ಲಿ ಹಮ್ಮಿಕೊಂಡಿದ್ದ ಅಧಿವೇಶನಕ್ಕೆ ಗಾಂಧೀಜಿಯವರನ್ನು ವಿಶೇಷವಾಗಿ ಬರಮಾಡಿಕೊಳ್ಳಲಾಗಿತ್ತು. ಗಾಂಧೀಜಿ ದಕ್ಷಿಣ ಆಫ್ರಿಕಾದಲ್ಲಿ ನಡೆಸಿದ ಹೋರಾಟದ ಕುರಿತ ಅಭಿಪ್ರಾಯ ಮತ್ತು ಅನುಭವಗಳನ್ನು ಭಾಷಣದ ರೂಪದಲ್ಲಿ ತಿಳಿಸಿಕೊಡಬೇಕಿತ್ತು. ಅಧಿವೇಶನದಲ್ಲಿ ಭಾಗಿಯಾಗಿದ್ದ ಗಾಂಧೀಜಿ ಅಲ್ಲಿನ ಶೌಚಾಲಯಗಳಲ್ಲಿದ್ದ ಅಮೇಧ್ಯವನ್ನು ಕಂಡು ಮೊದಲು ಅದನ್ನು ಸ್ವಚ್ಛಗೊಳಿಸಲು ತೆರಳಿದರು. ಇದನ್ನು ಕಂಡ ಸಂಯೋಜಕರು ಗಾಬರಿಗೊಳಗಾದರು. ಅಂದೇ ಅವರು 'ತತ್ತ್ವದ ಉಪದೇಶಕ್ಕಿಂತ ತತ್ವದ ಅನುಷ್ಠಾನ ಮುಖ್ಯ' ಎಂಬುದನ್ನು ಜನತೆಗೆ ಅರಿವು ಮಾಡಿಕೊಟ್ಟರು. ಒಬ್ಬ ಶ್ರೇಷ್ಠ ಜನನಾಯಕ ನಲ್ಲಿರಬೇಕಾದ ಉನ್ನತ ಆದರ್ಶ ಗುಣಕ್ಕೆ ಅವರು ಅಂದು ಮಾದರಿಯಾಗಿ ಕಂಗೊಳಿಸಿದರು. 'ಮಾತಿಗಿಂತ ಕೃತಿ ಅತ್ಯಂತ ಲೇಸು' ಎಂಬ ತತ್ತ್ವವನ್ನು ಅಂದು ಜನಮಾನಸ ದಲ್ಲಿ ಬೆಳಗಿಸುವುದರ ಮೂಲಕ ತತ್ವದ ಅನುಷ್ಠಾನದ ತತ್ಪರತೆಯ ದೀಕ್ಷೆಯ ಮಹತ್ವಪೂರ್ಣ ಕೊಡುಗೆಯನ್ನು ಅವರು ಅಂದು ನೀಡಿದರು. ಈ ತತ್ತ್ವದ ತನ್ಮಯತೆಯೇ ಮುಂದಿನ ಸ್ವಾತಂತ್ರ್ಯ ಹೋರಾಟದಲ್ಲಿ ಎಲ್ಲರಿಗೂ ಹೊಸ ಚೈತನ್ಯ ತುಂಬಿದ್ದು ಒಂದು ಇತಿಹಾಸ.

ದೇಶದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಕುರಿತ ಚಟುವಟಿಕೆಗಳನ್ನು ದಮನ ಮಾಡುವ ಸಂಬಂಧ ಬ್ರಿಟಿಷ್ ಸರ್ಕಾರ ರೌಲತ್ ಕಾಯಿದೆಯನ್ನು ದೇಶದಲ್ಲಿ ಜಾರಿಗೊಳಿಸಿತ್ತು. ಯಾವುದೇ ವ್ಯಕ್ತಿಯನ್ನು ಕಾರಣ ನೀಡದೇ ಬಂಧಿಸುವ, ವಿಚಾರಣೆ ಇಲ್ಲದೇ ೨ ವರ್ಷಗಳ ಕಾಲ ಬಂಧನ ದಲ್ಲಿಡುವ ಮತ್ತು ಪತ್ರಿಕಾ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಕರಾಳ ಕಾನೂನು ಇದಾಗಿತ್ತು. ಈ ಕಾಯ್ದೆಯ ವಿರುದ್ಧ ಗಾಂಧೀಜಿ ಏಪ್ರಿಲ್ ೬ ೧೯೧೯ರಲ್ಲಿ ಅಹಿಂಸಾತ್ಮಕ ಹೋರಾಟಕ್ಕೆ ದೇಶವ್ಯಾಪಿ ಕರೆ ನೀಡಿದರು. ಚೌಪಾಟಿಯಲ್ಲಿ ಅವರು ತಮ್ಮ 'ಹಿಂದ್ ಸ್ವರಾಜ್' ಎಂಬ ನಿಷೇದಿತ ಕೃತಿಯನ್ನು ಮಾರಾಟ ಮಾಡುವುದರ ಮೂಲಕ ಹೋರಾಟವನ್ನು ಪ್ರಾರಂಭಿಸಿದ್ದು ಒಂದು ವಿಶೇಷ ಎನಿಸಿಕೊಂಡಿತು. ಮದ್ರಾಸ್, ಅಲಹಾಬಾದ್, ದೆಹಲಿ, ಲಕ್ನೋ ಮುಂತಾದ ಕಡೆ ಸಾರ್ವಜನಿಕ ಭಾಷಣ ಮಾಡಿದ ಗಾಂಧೀಜಿ ಯವರನ್ನು ಬ್ರಿಟಿಷ್ ಸರ್ಕಾರ ಏಪ್ರಿಲ್ ೯ರಂದು ಬಂಧಿಸಿತು. ಇದರ ಫಲವಾಗಿ ಸತ್ಯಾಗ್ರಹದ ಸ್ವರೂಪ ಹಿಂಸಾತ್ಮಕ ರೂಪವನ್ನು ಪಡೆಯಿತು. ಈ ಸಂದರ್ಭದಲ್ಲಿ ಪಂಜಾಬಿನ ಜನಪ್ರಿಯ ನಾಯಕರಾಗಿದ್ದ ಡಾ. ಕಿಚ್ಲು ಮತ್ತು ಡಾ. ಸತ್ಯಪಾಲ್ ರವರನ್ನು ಬಂಧಿಸಲಾಯಿತು. ಇದನ್ನು ವಿರೋಧಿಸಿ ಪಂಜಾಬಿನ ಜಲಿಯನ್‌ವಾಲಾ ಬಾಗ್‌ನಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಜನರಲ್ ಡಯರ್ ಸ್ವಾತಂತ್ರ ಹೋರಾಟಗಾರರ ಮೇಲೆ ಗುಂಡಿನ ಮಳೆಗೆರೆದನು. ಇದರಲ್ಲಿ ಸಾವಿರಾರು ದೇಶಭಕ್ತರು ತಮ್ಮ ಪ್ರಾಣವನ್ನು ದೇಶಕ್ಕಾಗಿ ಸಮರ್ಪಿಸಿದರು. ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಜಲಿಯನ್‌ವಾಲಾಬಾಗ್ ದುರಂತ ಘಟನೆ ಎಂದೂ ಮರೆಯಲಾಗದ ಘಟನೆಯಾಗಿ ಇತಿಹಾಸದ ಪುಟಗಳಲ್ಲಿ ಸೇರಿಹೋಯಿತು. ರೌಲತ್ ಕಾಯಿದೆಯ ವಿರುದ್ಧ ಗಾಂಧೀಜಿ ಹಮ್ಮಿಕೊಂಡಿದ್ದ ಅಹಿಂಸಾತ್ಮಕ ಚಳುವಳಿ ವ್ಯವಸ್ಥಿತ ಹಾದಿಯಲ್ಲಿ ಸಾಗಲಿಲ್ಲ. ಇದನ್ನು ಗಾಂಧೀಜಿ 'ಹಿಮಾಲಯದೆತ್ತರದ ತಪ್ಪು ಲೆಕ್ಕಾಚಾರ' ಎಂದು ಕರೆದರು. ಸತ್ಯಾಗ್ರಹವನ್ನು ನಿಲುಗಡೆ ಗೊಳಿಸಿದರು. ಆದರೆ ಗಾಂಧೀಜಿ ಪ್ರಾರಂಭಿಸಿದ ಚಳುವಳಿಯ ಪರಿಣಾಮ ದೇಶದ ಜನತೆಯಲ್ಲಿ

ಸ್ವಾತಂತ್ರ್ಯ ಪ್ರೇಮದ ಸಾತ್ವಿಕ ಬೆಳಕು ಪ್ರಜ್ವಲವಾಗಿ ಬೆಳಗಲಾರಂಭಿಸಿತು.

ಖಿಲಾಫತ್ ಚಳುವಳಿಯನ್ನು ಅಹಿಂಸಾತ್ಮಕ ಹಾದಿಯಲ್ಲಿ ನಡೆಸಿಕೊಂಡು ಹೋಗುವಂತೆ ತಿಳಿಸಿದ ಗಾಂಧೀಜಿ 'ಹಿಂದೂಗಳು ಹಾಗೂ ಮುಸ್ಲಿಂರ ನಡುವೆ ಏಕತೆಯನ್ನು ಸಾಧಿಸಲು ನೂರು ವರ್ಷಗಳಿಗೆ ಒಮ್ಮೆ ದೊರೆಯುವ ಸುವರ್ಣ ಅವಕಾಶ' ಎಂದು ಬಹಿರಂಗ ವಾಗಿ ಘೋಷಣೆ ಮಾಡಿದರು. ಏಪ್ರಿಲ್ ೧, ೧೯೨೦ ರಂದು ಅಸಹಕಾರ ಚಳುವಳಿಗೊಂದು ಮೂರ್ತ ರೂಪ ಕೊಟ್ಟ ಗಾಂಧೀಜಿ ದೇಶಾದ್ಯಂತ ಸಂಚರಿಸಿದರು. ಸಾವಿರಾರು ಸಾರ್ವಜನಿಕ ಸಭೆಗಳನ್ನು ನಡೆಸಿದರು. ಬ್ರಿಟಿಷ್ ಸರ್ಕಾರ ನೀಡಿದ ಎಲ್ಲಾ ಗೌರವ ಬಿರುದುಗಳನ್ನು ಅವರು ತಿರಸ್ಕರಿಸಿದರು. ಗಾಂಧೀಜಿಯ ಕರೆಗೆ ದೇಶದ ಜನತೆ ತುಂಬು ಹೃದಯದಿಂದ ಸ್ಪಂದಿಸಿದರು. ಒಂದು ಸಮೀಕ್ಷೆಯ ಪ್ರಕಾರ ಸುಮಾರು ೯೦ ಸಾವಿರಕ್ಕೂ ಅಧಿಕ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳನ್ನು ತಿರಸ್ಕರಿಸಿದರು. ಆಗ ತಾನೇ ಹುಟ್ಟಿಕೊಂಡಿದ್ದ ರಾಷ್ಟ್ರೀಯ ಶಾಲಾ ಕಾಲೇಜುಗಳಿಗೆ ಅವರೆಲ್ಲರೂ ಸೇರಿದರು. ಗಾಂಧೀಜಿಯ ಕರೆಗೆ ಪ್ರಖ್ಯಾತ ವಕೀಲರಾದ ದೇಶಬಂಧು ಚಿತ್ತರಂಜನ್‌ದಾಸ್, ಮೋತಿಲಾಲ್ ನೆಹರೂ, ವಲ್ಲಭಬಾಯಿ ಪಟೇಲ್, ರಾಜಗೋಪಾಲಾ ಚಾರಿ ಮುಂತಾದವರು ನ್ಯಾಯಾಲಯಗಳನ್ನು ತಿರಸ್ಕರಿಸಿದರು. ಚಳುವಳಿಗಾರರು ವಿದೇಶಿ ಬಟ್ಟೆಯನ್ನು ಮನೆಯಿಂದ ಮನೆಗೆ ಹೋಗಿ ಸಂಗ್ರಹಿಸಿ ಸುಡ ಲಾರಂಭಿಸಿದರು. ವಿದೇಶಿ ಬಟ್ಟೆಗಳನ್ನು ಮಾರಾಟ ಮಾಡುತ್ತಿದ್ದ, ಮಾರಾಟ ಕೇಂದ್ರಗಳ ಮುಂದೆ ಧರಣಿ ನಡೆಸುವುದರ ಮೂಲಕ ಅವರ ಮನಸ್ಸನ್ನು ಪರಿವರ್ತಿಸುವ ಕಾರ್ಯಕ್ಕೆ ಮುಂದಾದರು. ಮಧುರೈ ಯಲ್ಲಿ ಗಾಂಧೀಜಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುತ್ತಿದ್ದ ಸಂದರ್ಭದಲ್ಲಿ ಒಬ್ಬ ವಿದ್ಯಾರ್ಥಿ 'ಖಾದಿಯ ಬೆಲೆ ತೀರ ಅಧಿಕ' ಎಂದು ದೂರು ನೀಡಿದರು. ಅಂದೇ ಗಾಂಧೀಜಿ ತಮ್ಮ ಮೈಮೇಲೆ ಅಲ್ಪಮಟ್ಟದ ಬಟ್ಟೆ ಧರಿಸುವುದರ ಮೂಲಕ ವಿದ್ಯಾರ್ಥಿಯ ಪ್ರಶ್ನೆಗೆ ಉತ್ತರ ನೀಡಿದರು.ಅವರ ಅಸಹಕಾರ ಚಳುವಳಿಯಿಂದ ವಿದೇಶದಿಂದ ಆಮದು ಮಾಡಿಕೊಳ್ಳುತ್ತಿದ್ದ ಪ್ರಮಾಣ ಗಣನೀಯ ಪ್ರಮಾಣದಲ್ಲಿ ಇಳಿಮುಖಗೊಂಡಿತು. ೧೯೨೦-೨೧ರ ಸಾಲಿನಲ್ಲಿ ೧೦೨ ಕೋಟಿ ರೂಪಾಯಿ ಇದ್ದ ಆಮದು ಪ್ರಮಾಣ ೧೯೨೧-೨೨ರಲ್ಲಿ ೫೭ ಕೋಟಿಗೆ ಇಳಿಯಿತು. ಇದು ಅವರ ಹೋರಾಟದ ಪ್ರಖರತೆಗೊಂದು ಸಾಕ್ಷಿ ಎಂದು ಉಲ್ಲೇಖಿಸಬಹುದು.

೧೯೨೧ರಲ್ಲಿ ಗಾಂಧೀಜಿ ವೈಸ್‌ರಾಯ್‌ರಿಗೆ ಪತ್ರವೊಂದನ್ನು ಬರೆದು ಸ್ವಾತಂತ್ರ್ಯ ಹೋರಾಟಗಾರರನ್ನು ಬಿಡುಗಡೆಗೊಳಿಸಬೇಕು ಹಾಗೂ ಪತ್ರಿಕಾ ಸ್ವಾತಂತ್ರ್ಯದ ಮೇಲೆ ವಿಧಿಸಿದ ನಿರ್ಬಂಧವನ್ನು ತೆಗೆದುಹಾಕುವಂತೆ ವಿನಂತಿಸಿದರು. ಪತ್ರಕ್ಕೆ ಪೂರಕವಾದ ಉತ್ತರ ಬಾರದೇ ಇದ್ದಾಗ ಗಾಂಧೀಜಿ ಅನಿವಾರ್ಯವಾಗಿ ಕಾನೂನು ಭಂಗ ಚಳುವಳಿಯ ಕರೆ ನೀಡಿದರು. ಬ್ರಿಟಿಷ್ ಸರ್ಕಾರದ ವಿರುದ್ಧ ಅಸಹನೆ ಹಾಗೂ ಅಸಮಾಧಾನ ತೋರಿದ ಸಂಬಂಧ ಗಾಂಧೀಜಿಯವರನ್ನು ಬ್ರಿಟಿಷ್ ಸರ್ಕಾರ ಮಾರ್ಚ್ ೧೦, ೧೯೨೨ರಂದು ಬಂಧಿಸಿತು.ಅವರಿಗೆ ೬ ವರ್ಷಗಳ ಕಾಲ ಕಾರಾಗೃಹ ಶಿಕ್ಷೆಯನ್ನು ವಿಧಿಸಿತು. ೧೯೨೪ರಲ್ಲಿ ವೈದ್ಯಕೀಯ ಕಾರಣದಿಂದ ಅವರನ್ನು ಬಿಡುಗಡೆಗೊಳಿಸಲಾಯಿತು. ಅವರ ಸಮರ್ಥ ನಾಯಕತ್ವದಲ್ಲಿ ನಡೆಯುತ್ತಿದ್ದ ಅಹಿಂಸಾತ್ಮಕ ಚಳುವಳಿಯಿಂದ ಹಿಂದೂಗಳು ಹಾಗೂ ಮುಸ್ಲಿಂರಲ್ಲಿ ಏಕತಾ ಭಾವನೆ ಬೆಳವಣಿಗೆಯಾಗಿದ್ದು ಒಂದು ಮಹತ್ವ ಪೂರ್ವ ಘಟನೆ ಎನಿಸಿಕೊಂಡಿತು. ಸರ್ಕಾರದ ದಮನಕಾರಿ ಹಾಗೂ ಒಡೆದು ಆಳುವ ನೀತಿಯನ್ನು ಚಳುವಳಿಗಾರರು ಅರ್ಥಮಾಡಿಕೊಂಡು ಒಗ್ಗಟ್ಟಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ತದನಂತರದ ದಿನಗಳಲ್ಲಿ ಈ ಸಮನ್ವಯ ಭಾವನೆ ಕಣ್ಮರೆಯಾಗಿದ್ದು ನಿಜಕ್ಕೂ ದೇಶದ ಒಂದು ದುರಂತ ಸಂಗತಿ ಎನ್ನಬಹುದು.

೧೯೨೯ರ ಡಿಸೆಂಬರ್‌ನಲ್ಲಿ ನಡೆದ ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ ಪೂರ್ಣ ಸ್ವಾತಂತ್ರ್ಯ ಪಡೆಯುವುದೇ ನಮ್ಮ ಗುರಿ ಎಂದು ಘೋಷಣೆ ಮಾಡಲಾಯಿತು. 'ಸ್ವರಾಜ್ಯ' ಎಂದರೆ ಸಂಪೂರ್ಣ ಸ್ವಾತಂತ್ರ್ಯ ಎಂದು ಗಾಂಧೀಜಿ ಸಾರಿದರು. ಈ ಗುರಿ ಸಾಧನೆಗಾಗಿ ಅಹಿಂಸಾತ್ಮಕ ಅಸಹಕಾರ ಚಳುವಳಿಯ ಅಸ್ತ್ರವನ್ನು ಭಾರತೀಯರು ಪ್ರಯೋಗಿಸಬೇಕೆಂದು ಗಾಂಧೀಜಿ ಕರೆ ನೀಡಿದರು. ಜನವರಿ ೨೦, ೧೯೩೦ರಂದು ದೇಶಾದ್ಯಂತ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಿಕೊಂಡು ಬರಲಾಯಿತು. ೧೯೩೦ರಲ್ಲಿ ಬ್ರಿಟಿಷ್ ಸರ್ಕಾರದ ವಿರುದ್ಧ ಕಾನೂನುಭಂಗ ಚಳುವಳಿಯನ್ನು ಪುನಃ ಪ್ರಾರಂಭಿಸಲು ಗಾಂಧೀಜಿ ಕರೆ ನೀಡಿದರು. ಗಾಂಧೀಜಿ ಉಪ್ಪಿನ ಸತ್ಯಾಗ್ರಹ ಕೈಗೊಳ್ಳಲು ತೀರ್ಮಾನಿಸಿದರು. ಸುಮಾರು ೨೪೦ ಮೈಲು ದೂರದ ಪಶ್ಚಿಮ ಕರಾವಳಿಯ ದಂಡಿಗೆ ಗಾಂಧೀಜಿ ೨೪ ದಿನಗಳ ಕಾಲ ಕಾಲ್ನಡಿಗೆಯಲ್ಲಿ ಕ್ರಮಿಸಿ ಉಪ್ಪನ್ನು ತಯಾರಿಸುವುದರ ಮೂಲಕ ಕಾನೂನು ಭಂಗ ಚಳುವಳಿಯಲ್ಲಿ ಭಾಗಿಗಳಾದರು. ಬ್ರಿಟಿಷ್ ಸರ್ಕಾರ ಮೇ ೫ ೧೯೩೦ರಂದು ಗಾಂಧೀಜಿಯವರನ್ನು ಬಂಧಿಸಿ ಯರವಾಡ ಕಾರಾಗೃಹಕ್ಕೆ ಕಳುಹಿಸಿತು. ೧೯೩೨ರಲ್ಲಿ ಪ್ರಕಟಿಸಿದ ಮತೀಯ ತೀರ್ಪಿನ ವಿರುದ್ಧ ಗಾಂಧೀಜಿ ಯರವಾಡ ಕಾರಾಗೃಹದಲ್ಲಿಯೇ ಉಪವಾಸ ಸತ್ಯಾಗ್ರಹ ಕೈಗೊಂಡರು. ಹಿಂದೂ ಸಮಾಜವನ್ನು ಛಿದ್ರಗೊಳಿಸುವ ಹುನ್ನಾರ ಈ ತೀರ್ಪಿನಲ್ಲಿದೆ ಎನ್ನುವ ಅಭಿಪ್ರಾಯ ಅವರದು. ಅವರು ಹರಿಜನರ ಉದ್ಧಾರಕ್ಕಾಗಿ





ಟೊಂಕ ಕಟ್ಟಿ ನಿಂತರು. ಹಿಂದೂ ಸಮಾಜಕ್ಕೆ ಕಳಂಕವಾಗಿದ್ದ ಅಸ್ಪೃಶ್ಯತೆಯ ವಿರುದ್ಧ ನೂರಾರು ರಚನಾತ್ಮಕ ಕಾರ್ಯಕ್ರಮವನ್ನು ಹಮ್ಮಿಕೊಂಡು ದೇಶದ ಗಮನ ಸೆಳೆದರು. ಹರಿಜನರ ಏಳಿಗೆಗಾಗಿ 'ಹರಿಜನ' ಎಂಬ ವಾರಪತ್ರಿಕೆಯ ಮೂಲಕ ಜನತೆಗೆ ಧಾರ್ಮಿಕ ತತ್ವದ ವೈಚಾರಿಕ ಜ್ಞಾನವನ್ನು ತಿಳಿಸುವ ಪ್ರಯತ್ನ ಮಾಡಿದರು.

ಗಾಂಧೀಜಿ ಪ್ರಾರಂಭಿಸಿದ ಅಸಹಕಾರ ಚಳುವಳಿ ಯಿಂದ ಎಚ್ಚೆತ್ತುಕೊಂಡ ಬ್ರಿಟಿಷ್ ಸರ್ಕಾರ ದ್ವಿದಳ ಆಡಳಿತ ಪದ್ಧತಿಯ ಜಾರಿಗೆ ಸೈಮನ್ ಆಯೋಗವನ್ನು ರಚಿಸಿತು. ಇದೇ ಸಂದರ್ಭದಲ್ಲಿ ಅಂದರೆ ಆಗಸ್ಟ್ ೬, ೧೯೪೨ರಂದು ಗಾಂಧೀಜಿ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿರಿ' ಎಂಬ ಮಹತ್ವಪೂರ್ಣ ಆಂದೋಲನಕ್ಕೆ ಕರೆ ನೀಡಿದರು. ಆ ದಿನವೇ 'ಮಾಡು ಇಲ್ಲವೇ ಮಡಿ' ಎಂಬ ಘೋಷಣೆಯನ್ನು ಸಹ ಅವರು ಮಾಡಿದರು. ಬ್ರಿಟಿಷ್ ಸರ್ಕಾರ ಕಾಂಗ್ರೆಸ್‌ನ ಪ್ರಮುಖ ನಾಯಕರನ್ನು ಬಂಧಿಸಿತು. ದೇಶವ್ಯಾಪಿ ಚಳುವಳಿಯ ಸ್ವರೂಪ ಹಿಂಸಾರೂಪಕ್ಕೆ ತಿರುಗಿತು. ದೇಶಭಕ್ತರು ಭೂಗತರಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯರಾದರು. ಇದೇ ಸಂದರ್ಭದಲ್ಲಿ ಪ್ರತ್ಯೇಕ ಪಾಕಿಸ್ತಾನದ ರಚನೆಯ ಉದ್ದೇಶ ಹೊಂದಿದ್ದ ಮುಸ್ಲಿಂ ಲೀಗ್‌ನ ಜಿನ್ನಾರವರು 'ಬ್ರಿಟಿಷರೇ ಭಾರತವನ್ನು ವಿಭಜಿಸಿದ ನಂತರವೇ ತೊಲಗಿರಿ' ಎಂದು ಕರೆಕೊಟ್ಟರು. ಗಾಂಧೀಜಿಗೆ ಈ ವಿದ್ಯಮಾನದಿಂದ ಜರ್ಜರಿತಗೊಂಡರಲ್ಲದೇ ಅಘಾತಕ್ಕೊಳಗಾದರು. ೧೯೪೬ರಲ್ಲಿ ಮುಂಬೈಯ ನೌಕಾಪಡೆಯ ನಾವಿಕರು ಸ್ವಯಂಸ್ಫೂರ್ತಿಯಿಂದ ಬಂಡಾಯವೆದ್ದರು. ದೇಶದ ಎಲ್ಲಾ ನೌಕಾಪಡೆಗಳಿಗೂ ಇದು ಹರಡಿತು. ೧೯೪೬ರಲ್ಲಿ ಸುಮಾರು ೨೦೦೦ಕ್ಕೂ ಅಧಿಕ ಧರಣಿ ಮತ್ತು ಸತ್ಯಾಗ್ರಹಗಳು ನಡೆದವು. ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧದ ಹೋರಾಟದಲ್ಲಿ ಸಮಾಜದ ಎಲ್ಲಾ ಕ್ಷೇತ್ರ ಗಳಿಂದಲೂ ಜನತೆ ಸ್ವಯಂ ಸ್ಫೂರ್ತಿಯಿಂದ ಭಾಗವಹಿಸ ತೊಡಗಿದರು. ದೇಶಾದ್ಯಂತ ಸ್ವಾತಂತ್ರ್ಯ ಚಳುವಳಿಯ ಸ್ವರೂಪ ಬದಲಾಗತೊಡಗಿತು. ಇದನ್ನರಿತ ಬ್ರಿಟಿಷರು ದೇಶವನ್ನು ಬಿಟ್ಟುಹೋಗುವ ಪೂರ್ವದಲ್ಲಿ ದೇಶವನ್ನು ವಿಭಜಿಸುವ ಕಾರ್ಯಕ್ಕೆ ಮುಂದಾದರು.

ದ್ವಿತೀಯ ಮಹಾಯುದ್ಧದ ನಂತರ ಇಂಗ್ಲೆಂಡಿನ ಅಧಿಕಾರ ವಹಿಸಿಕೊಂಡ ಕ್ಲೆಮೆಂಟ್ ಅಟ್ಲೆರವರ ಲೇಬರ್ ಪಕ್ಷವು ಭಾರತದ ಸಮಸ್ಯೆಯನ್ನು ಬಗೆಹರಿಸಲು ಒಂದು ಕ್ಯಾಬಿನೆಟ್ ಆಯೋಗವನ್ನು ೧೯೪೬ರಲ್ಲಿ ಭಾರತಕ್ಕೆ ಕಳುಹಿಸಿತು. ಭಾರತ ಸ್ವಾತಂತ್ರ್ಯ ಕಾಯ್ದೆಯು ೧೯೪೭ರ ಜುಲೈ ೧೮ರಂದು ಸಂಸತ್ತಿನ ಸಮ್ಮತಿ ಪಡೆಯಿತು. ಸ್ವಾತಂತ್ರ್ಯ ಕಾಯ್ದೆಯು ೧೯೪೭ರ ಆಗಸ್ಟ್ ೧೫ರಂದು ಕಾರ್ಯರೂಪಕ್ಕೆ ಬರುವಂತೆ ಅದು ಸೂಚಿಸಿದ ಅನ್ವಯ ಭಾರತ ಮತ್ತು ಪಾಕಿಸ್ತಾನ ಎಂಬ ಎರಡು ಪ್ರತ್ಯೇಕ ರಾಷ್ಟ್ರಗಳು ಅಸ್ತಿತ್ವ ಪಡೆದುಕೊಂಡಿತು. ಭಾರತ ಆಗಸ್ಟ್ ೧೫, ೧೯೪೭ರಂದು ಸ್ವಾತಂತ್ರ್ಯಗೊಂಡ ಒಂದು ರಾಷ್ಟ್ರ ವಾಗಿ ಉದಯಗೊಂಡಿತು. ದೇಶವಿಭಜನೆಯ ಸನ್ನಿವೇಶ ದಲ್ಲಿ ಮೌಂಟ್ ಬ್ಯಾಟನ್ ಆಡಳಿತಾತ್ಮಕ ಸಮಸ್ಯೆಯನ್ನು ಬಗೆಹರಿಸಲು ಸೂಕ್ತ ಕ್ರಮವನ್ನು ಕೈಗೊಂಡರು. ಸರ್ ರ್‍ಯಾಂಡ್‌ಕ್ಲಿಫ್ ಆಗಸ್ಟ್ ೧೭, ೧೯೪೭ರಂದು ಗಡಿ ನಕ್ಷೆಯನ್ನು ಪ್ರಕಟಿಸಿದನು. ಈ ಸಂದರ್ಭದಲ್ಲಿ ಲಕ್ಷಾಂತರ ಮಂದಿ ನಿರಾಶ್ರಿತರಾದರು. ಅಮಾನುಷವಾದ ಕೊಲೆ, ಸುಲಿಗೆ ಹಾಗೂ ಅತ್ಯಾಚಾರಗಳು ನಡೆದವು. ಕೋಮು ಗಲಭೆಗಳು ಮುಗಿಲು ಮುಟ್ಟಿದವು. ಈ ಎಲ್ಲಾ ದುರಂತ ಸನ್ನಿವೇಶ ಗಳನ್ನು ಕಣ್ಣಾರೆ ಕಂಡ ಗಾಂಧೀಜಿ ಬಹು ದುಃಖಿತರಾದರು. ಸಾಗರದಷ್ಟು ದುಃಖವನ್ನು ಹೃದಯ ದಲ್ಲಿಟ್ಟುಕೊಂಡು ಅವರು ಕೋಮು ಸಾಮರಸ್ಯಕ್ಕಾಗಿ ಶತ ಪ್ರಯತ್ನ ನಡೆಸಿದರು. ಒಂದೆಡೆ ಅಧಿಕಾರಕ್ಕಾಗಿ ಜಟಾಪಟಿ ನಡೆಯು ತ್ತಿದ್ದರೆ ಮತ್ತೊಂದೆಡೆ ಗಾಂಧೀಜಿ ಪಶ್ಚಿಮ ಬಂಗಾಳದ ಗಲಭೆಗೊಳಗಾದ ಪ್ರದೇಶಗಳಿಗೆ ಭೇಟಿ ಕೊಟ್ಟು ಶಾಂತಿ ಮಂತ್ರವನ್ನು ಜಪಿಸುತ್ತಿದ್ದರು. ಶಾಂತಿ-ಸಹನೆ-ಸಹಬಾಳ್ವೆ ಮತ್ತು ಸಾಮರಸ್ಯ ಭಾವನೆಗಳು ನೆಲೆಗೊಳ್ಳಲು ಅವರು ಪ್ರಯತ್ನಿಸಿದರು. ಈ ಕಾರ್ಯದಲ್ಲಿ ಅವರು ಯಶಸ್ಸು ಸಹ ಕಂಡರು. ಕೊನೆಗೂ ದೇಶವಿಭಜನೆಯ ಕಾರ್ಯ ಬಹು ವಿಷಾದದಿಂದಲೇ ಅಂತ್ಯಗೊಂಡಿತು.

ಜನವರಿ ೩೦, ೧೯೪೮ರಂದು ಗಾಂಧೀಜಿ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸುವ ಸಂದರ್ಭದಲ್ಲಿ ಗಾಂಧೀಜಿ ಯನ್ನು ತಪ್ಪಾಗಿ ಅರ್ಥೈಸಿಕೊಂಡಿದ್ದ ಒಬ್ಬ ವ್ಯಕ್ತಿ ನಡೆಸಿದ ಗುಂಡೇಟಿಗೆ ತಮ್ಮ ಪ್ರಾಣವನ್ನು ಭಗವಂತನ ನಾಮಸ್ಮರಣೆಯ ಮೂಲಕ ಸಮರ್ಪಿಸಿದರು. ಅಂದು ಯುಗದ ಒಂದು ಮಹಾನ್ ಜ್ಯೋತಿಯ ಅಸ್ತಂಗತ ದೊಂದಿಗೆ ಗಾಂಧೀಜಿ ಭೌತಿಕವಾಗಿ ನಮ್ಮಿಂದ ದೂರ ವಾದರು. ಅಂದು ಇಡೀ ವಿಶ್ವವೇ ದುಃಖದ ಶೋಕ ಸಾಗರದಲ್ಲಿ ಮುಳುಗಿತು. ವಿಶ್ವ ಸಂಸ್ಥೆಯ ಎಲ್ಲಾ ಸದಸ್ಯ ರಾಷ್ಟ್ರಗಳು ತಮ್ಮ ರಾಷ್ಟ್ರಧ್ವಜವನ್ನು ಅರ್ಧ ಮಟ್ಟದಲ್ಲಿ ಹಾರಿಸಿ ಗಾಂಧೀಜಿಗೆ ಭಾವಪೂರ್ಣ ನಮನಗಳನ್ನು ಸಲ್ಲಿಸಿತು.

ಅವರ ಬದುಕಿನ ಪ್ರತಿಯೊಂದು ಹೆಜ್ಜೆಯೂ ಸಹ ಸತ್ಯದ ಶೋಧನೆಗಳಾಗಿದ್ದವು. ಅವರ ಸಂಪೂರ್ಣ ಬದುಕು ಸತ್ಯ ಮತ್ತು ಅಹಿಂಸಾ ತತ್ವಗಳ ಮೇಲೆ ಬರೆದ ಭಾಷ್ಯ ಎಂದರೆ ತಪ್ಪಾಗಲಾರದು. ಅವರು ನೀಡಿದ ವಿಶ್ವಮಾನ್ಯ ಸಂದೇಶಗಳು ಸದಾ ಲೋಕ ಕಲ್ಯಾಣವನ್ನು ಬಯಸುತ್ತದೆ. ಅವರ ತತ್ವಸಂದೇಶದ ಸಾತ್ವಿಕ ಮಾರ್ಗದಲ್ಲಿ ದೇಶ ಮತ್ತು ಜಗತ್ತು ಸಾಗಿದರೆ ಜಗತ್ತು ಕಲ್ಯಾಣ ಕಾಣಬಹುದು.

❀

# ಸಂಸ್ಕೃತಿಯ ಮೂರ್ತರೂಪ ಶಿಕ್ಷಕ !

– ಡಿ.ಆರ್. ಲಕ್ಷ್ಮೀಲತಮ್ಮ *

'ಮಾನವರಲ್ಲಿ ಸದ್ಗುಣಗಳನ್ನು ಅರಳಿಸಿ, ವಿಶ್ವಮಾನವ ವ್ಯಕ್ತಿಯನ್ನಾಗಿ ಮಾಡುವುದೇ ಶಿಕ್ಷಣದ ಪರಮ ಧ್ಯೇಯ' (Education is that which makes a man of good character and useful to the Society) ಎಂದು ಶಿಕ್ಷಣದ ಕುರಿತು ಯಾಜ್ಞವಲ್ಕ್ಯ ಮಹರ್ಷಿ ಒಂದೆಡೆ ವ್ಯಾಖ್ಯಾನಿಸಿದ್ದಾರೆ. ನಮ್ಮ ರಾಷ್ಟ್ರದ ಶ್ರೇಷ್ಠ ಶಿಕ್ಷಣ ತಜ್ಞರು ಹಾಗೂ ಆದರ್ಶ ಶಿಕ್ಷಕರಾದ ಡಾ. ಸರ್ವಪಲ್ಲಿ ರಾಧಾಕೃಷ್ಣನ್ ರವರು ಸಹ ಶಿಕ್ಷಣದ ಕುರಿತು "ಮನುಕುಲದ ಕಲ್ಯಾಣವೇ ಶಿಕ್ಷಣದ ಪರಮ ಧ್ಯೇಯ" ಎಂದು ಅರ್ಥಪೂರ್ಣವಾಗಿ ವಿಶ್ಲೇಷಿಸಿರುವುದನ್ನು ನಾವು ಕಾಣಬಹುದು. ಸ್ವಾಮಿ ವಿವೇಕಾನಂದರು ಮೈಸೂರು ಮಹಾರಾಜರಿಗೆ ಶಿಕ್ಷಣ ವಿಷಯದ ಕುರಿತು ಬರೆದ ಪತ್ರ ಒಂದು ನಮ್ಮ ಗಮನ ಸೆಳೆಯುತ್ತದೆ. ಅವರು "ಶಿಕ್ಷಣ ಮನುಷ್ಯನಲ್ಲಿ ಸಚ್ಚಾರಿತ್ರ್ಯವುಳ್ಳ ವ್ಯಕ್ತಿತ್ವವನ್ನು ಬೆಳೆಸಬೇಕು, ಮಾನವೀಯ ಮೌಲ್ಯಗಳನ್ನು ವಿಕಸಿಸಬೇಕು, ಇತರರೊಂದಿಗೆ ಪ್ರೀತಿ –ವಿಶ್ವಾಸ ಮತ್ತು ಸಹಕಾರ ಮನೋಭಾವದಿಂದ ಬಾಳುವುದನ್ನು ಕಲಿಸಬೇಕು, ಇವುಗಳನ್ನು ಕಲಿಸದ ಶಿಕ್ಷಣ ನಿಜಾರ್ಥದಲ್ಲಿ ಶಿಕ್ಷಣವೇ ಅಲ್ಲ!" ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾ ತಿಳಿಸಿದ ಮತ್ತೊಂದು ಮಾತು ಅತ್ಯಂತ ಗಮನಾರ್ಹ "ವಿದ್ಯಾವಂತ ರಾದವರು ಎಲ್ಲಿಯವರೆಗೂ ನೊಂದವರ, ಶೋಷಿತರ ಕಣ್ಣೀರನ್ನು ಒರೆಸದಿರುವವರೋ ಅಲ್ಲಿಯವರೆಗೂ ಅವರೆಲ್ಲರೂ ಸಹ ಸಮಾಜದ್ರೋಹಿಗಳು!".

ನಿಜ, ಇಂದು ಶಿಕ್ಷಣ ಪಡೆದು ಸುಶಿಕ್ಷಿತರೆನಿಸಿಕೊಂಡ ನಾವೆಲ್ಲರೂ ಸಹ ಮಾಡುತ್ತಿರುವುದಾದರೂ ಏನು? ಎಂಬ ಪ್ರಶ್ನೆಯ ಮೂಲಕ ನಮ್ಮ ಅಂತರಂಗವನ್ನು ಪ್ರಶ್ನಿಸಿ ಕೊಂಡಾಗ ಸ್ವಾಮಿವಿವೇಕಾನಂದರ ಮನದಾಳದ ಅಂತರ್ಧ್ವನಿ ನಮಗೆ ಅರಿವಾಗುತ್ತದೆ. ಶಿಕ್ಷಣದ ಕುರಿತ ದಾರ್ಶನಿಕರ ವಿಚಾರಧಾರೆಗಳನ್ನು ನಾವಿಂದು ಮರೆತಿದ್ದೇವೆ. ಮಾನವ ಬದುಕಿನ ಅಜ್ಞಾನವನ್ನು ತೊಡೆದು ಜ್ಞಾನ ಜ್ಯೋತಿಯನ್ನು ಬೆಳಗಿಸಬೇಕಾದ ಶಿಕ್ಷಣವನ್ನು ನಾವಿಂದು ಅರ್ಥೈಸಿಕೊಂಡ ಪರಿ ಹಾದಿ ತಪ್ಪುತ್ತಿದೆಯೇ ಎಂಬ ಭಾವ ಮೂಡಿಸುತ್ತದೆ. ನಮ್ಮ ಇಂದಿನ ಶಿಕ್ಷಣ ಸಾಗುತ್ತಿರುವ ಹಾದಿ ಸಮಾಜವನ್ನು ವಿಕ್ಷಿಪ್ತ ಭ್ರಾಂತಿಯತ್ತ ಕರೆದೊಯ್ಯುತ್ತಿರು ವುದೇನೋ ಎಂಬ ಅನುಮಾನ ಮೂಡಿಸುತ್ತದೆ. ವಿದ್ಯಾರ್ಥಿಯ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗ ಬೇಕಾದ ಶಿಕ್ಷಣ ಇಂದು ಅರ್ಥಗಳಿಕೆಯೇ ಮುಖ್ಯ ಗುರಿ ಎಂಬ ಚಿತ್ತವನ್ನು ಅನಾರೋಗ್ಯಕರವಾಗಿ ಸಮಾಜದಲ್ಲಿ ಬೆಳೆಸುತ್ತಿದೆ. 'ಹಣ ಸಂಪಾದನೆಗಾಗಿಯೇ ಶಿಕ್ಷಣ' ಎಂಬ ಮನೋಚಿತ್ತ ಸಮಾಜದಲ್ಲಿ ಆವರಿಸುತ್ತಿರುವುದು ಅತ್ಯಂತ ವಿಷಾದನೀಯ ಸಂಗತಿ. ಶಿಕ್ಷಣದ ಒಂದಂಶವಾಗಬೇಕಾದ ಅರ್ಥಗಳಿಕೆ ಅರ್ಥಾತ್ ಆರ್ಥಿಕ ಸ್ವಾವಲಂಬಿತನ ಇಂದು ಶಿಕ್ಷಣದ ಸಮಗ್ರ ಸ್ವರೂಪವನ್ನೇ ಬದಲಾಯಿಸಿರುವುದು ಒಂದು ದುರಂತ.

ನಾವಿಂದು ಸಾಕ್ಷರತೆಯ ಮೂಲಕ ಸಾಧಿಸಿದ್ದಾದರೂ ಏನು?. ನಾವಿಂದು ಸಾಕ್ಷರತಾ ಪ್ರಮಾಣವನ್ನು ಅಧಿಕ ಮಾಡಿಕೊಂಡು ಸಾಗಿದ್ದೇವೆಯೇ ವಿನಹ ಆ ಮೂಲಕ ಸಾಧಿಸಬೇಕಾದಂತಹ ಸುಸಂಸ್ಕೃತ ಸಮಾಜ ನಿರ್ಮಾಣ ಕಾರ್ಯದಲ್ಲಿ ವಿಫಲರಾಗಿದ್ದೇವೆ ಎಂಬುದರಲ್ಲಿ ಸಂಶಯ ವಿಲ್ಲ. ನಮ್ಮ ದೇಶದಲ್ಲೇ ಹುಟ್ಟಿ ಬೆಳೆದು, ಶಿಕ್ಷಣ ಪಡೆದು ಹಣದಾಸೆಗೆ ಪರದೇಶಕ್ಕೆ ಹಾರುವ ಯುವಜನಾಂಗವನ್ನು ಕಂಡಾಗ ನಮ್ಮ ಶಿಕ್ಷಣ, ನಮ್ಮ ಸಂಸ್ಕೃತಿ ಮತ್ತು ದೇಶಾಭಿ ಮಾನವನ್ನು ಮರೆಮಾಚಿಸುತ್ತಿದೆಯೇ? ಎಂಬ ಕಳವಳವನ್ನು ಮೂಡಿಸುತ್ತದೆ. ನಮ್ಮನ್ನು ಸಾಕಿ, ಸಲಹಿದ ತಂದೆ ತಾಯಿ ಯರನ್ನು ನೋಡಿಕೊಳ್ಳದೇ ವೃದ್ಧಾಶ್ರಮಕ್ಕೆ ಸೇರಿಸಿ ಒಂದರ ಗಳಿಗೆಯೂ ಅವರೊಟ್ಟಿಗೆ ಕಳೆಯಲಾಗದಂತಹ ಮನೋ ಸ್ಥಿತಿಯನ್ನು ನಮ್ಮ ಶಿಕ್ಷಣ ಕಲಿಸುತ್ತಿದೆಯೇ? ಎಂಬ ಸಂಶಯ ನಮ್ಮ ಮನದಲ್ಲಿ ಮೂಡಿಸುತ್ತಿದೆ. ಪ್ರತಿ ಯೊಂದಕ್ಕೂ ಕರಾರು ಪತ್ರ ಮತ್ತು ನ್ಯಾಯಾಲಯದ ಆಶ್ರಯ ಕೋರಿ ಹೋಗುತ್ತಿರು ವುದನ್ನು ಕಂಡಾಗ ನಾವೆಷ್ಟು ಮೂರ್ಖ ವಿದ್ಯಾವಂತರೆನಿಸುತ್ತದೆ. ನೊಂದವರು ಹಾಗೂ ಸಂಕಷ್ಟದಲ್ಲಿರುವವರನ್ನು ಕಂಡು ಅವರ ನೋವಿಗೆ ಸ್ಪಂದಿಸದೇ ಅಥವಾ ಸಾಂತ್ವನ ಹೇಳಲಾಗದಂತಹ ಓದಾಸೀನ್ಯತೆ ನಮ್ಮ ಶಿಕ್ಷಣದ ಫಲವೇ? ಎಂಬ ಅಚ್ಚರಿ ತರಿಸುತ್ತಿದೆ. ಶಿಕ್ಷಣ ಪಡೆದಿರುವುದೇ ಬುದ್ಧಿವಂತಿಕೆಯಿಂದ ಮೋಸ ಮಾಡಲಿಕ್ಕೆ ಅಥವಾ ಹಣ ಗಳಿಸಲಿಕ್ಕೆ ಎಂಬ ವಿಕೃತ ವಾದ ನಮ್ಮ ಸಮಾಜದಲ್ಲಿ ಅವಿರ್ಭಾವಿಸುತ್ತಿರು ವುದನ್ನು ನಾವಿಂದು ಕಾಣಬಹುದು.

ಯಾವುದೇ ಶಿಕ್ಷಣ ಪಡೆಯದೇ ಸುಸಂಸ್ಕೃತರಾಗಿ ಬದುಕಿ ಬಾಳಿದ ನಮ್ಮ ಪೂರ್ವಿಕರನ್ನು ಕಂಡಾಗ ಅವರೆಷ್ಟು ಸಜ್ಜನರು ಎನಿಸುತ್ತದೆ. ಶಿಕ್ಷಣ ನಮಗೆ ಮಾನವೀಯ ಪ್ರೇಮ ಸಂಬಂಧದಿಂದ ಬದುಕುವ ಸುಸಂಸ್ಕೃತಿಯನ್ನು ಕಲಿಸದಿದ್ದರೆ ಅದೆಂತಹ ಶಿಕ್ಷಣ? ಎಂಬ ಪ್ರಶ್ನೆ ನಮ್ಮನ್ನು ಕಾಡುವುದರಲ್ಲಿ ಎರಡು ಮಾತಿಲ್ಲ. ನಿಜಕ್ಕೂ ನಾವಿಂದು ನಮ್ಮ ಮಕ್ಕಳಿಗೆ ನೀಡುತ್ತಿರುವ ಶಿಕ್ಷಣ ಪರಸ್ಪರ ಪ್ರೀತಿ–ವಿಶ್ವಾಸದಿಂದ ಬದುಕುವ ಶಿಕ್ಷಣವನ್ನು ನೀಡುತ್ತಿದೆಯೇ ಎನ್ನುವುದರ ಕುರಿತು ಸಮಾಜದ ಹಿರಿಯರು, ಚಿಂತಕರು ಚಿಂತಿಸಬೇಕಾದಂತಹ ಸಂಧಿಕಾಲದಲ್ಲಿ ನಾವಿಂದು ಇದ್ದೇವೆ. ಭಾರತದಲ್ಲಿನ ನಳಂದ ವಿಶ್ವವಿದ್ಯಾನಿಲಯ ಪ್ರಪಂಚಕ್ಕೆ ಶಿಕ್ಷಣದ ನೀತಿ ಸೂತ್ರಗಳಿಗೆ ದಿಕ್ಸೂಚಿಯಾಗಿ ಕಾರ್ಯನಿರ್ವಹಿಸಿದ್ದನ್ನು ನಾವು ಇತಿಹಾಸದ ಪುಟಗಳಿಂದ ಅರಿಯ ಬಹುದು. ಕೌಟಿಲ್ಯನ ಅರ್ಥಶಾಸ್ತ್ರ ವಿಶ್ವಕ್ಕೆ ಆದರ್ಶ ಎಂದು ಎಲ್ಲಾ ದಾರ್ಶನಿಕರು ಹಾಡಿ ಹೊಗಳಿದ್ದಾರೆ. ಒಂದು ಆದರ್ಶ ಶಿಕ್ಷಣ ತತ್ವಗಳಿಂದ ಒಂದು ಸದೃಢ ರಾಷ್ಟ್ರ ನಿರ್ಮಾಣ ಕಾರ್ಯ ಸಾಧ್ಯ ಎಂಬುದನ್ನು ಕೌಟಿಲ್ಯ ಸಾಧಿಸಿ ತೋರಿಸಿದ್ದರು. ಅವರ ಸುಸಂಸ್ಕೃತಿಯ ಹಾದಿಯ ಮೂಲಕ ಅರ್ಥ ಗಳಿಕೆಯ ಮಾರ್ಗ ಹಾಗೂ ಸಂಸ್ಕೃತಿ ಪೂರ್ಣ ಸಮಾಜ ನಿರ್ಮಾಣ ಕಾರ್ಯ ಅನನ್ಯವಾದದ್ದು. ಶಿಕ್ಷಣ, ಸುಸಂಸ್ಕೃತಿ ಯನ್ನು ಕಲಿಸುವ ಹಾದಿಯಲ್ಲಿ ಸಾಗದಿದ್ದರೆ ನಮ್ಮ ಭವಿಷ್ಯದ ದಿನಗಳು ಅತ್ಯಂತ ಕಠಿಣಕರ ಎನ್ನುವುದರಲ್ಲಿ ಯಾವುದೇ ಅತಿಶಯವಿಲ್ಲ.

"ನಮ್ಮ ಬದುಕಿನ ನಡೆ–ನುಡಿಗಳಿಗೆ ಸತ್‌ಸಂಸ್ಕಾರದ ರೂಪು ಕೊಡದಿರುವಂತಹ ಶಿಕ್ಷಣ ಮೃಗೀಯ ಸಮಾಜವನ್ನು ನಿರ್ಮಿಸುತ್ತದೆ" ಎಂದು ಎಚ್ಚರಿಸಿದ್ದ ಶ್ರೇಷ್ಠ ತತ್ವ ಜ್ಞಾನಿ ಡಾ.ಸರ್ವಪಲ್ಲಿ ರಾಧಾಕೃಷ್ಣನ್‌ರವರು "ಮಾನವನ ಬುದ್ಧಿ ಮತ್ತು ಮನಸ್ಸುಗಳ ಸಂಸ್ಕಾರವೇ ಸಂಸ್ಕೃತಿ ಆಗಿರುವುದರಿಂದ ಶಿಕ್ಷಣವು ಸಂಸ್ಕೃತಿಯ ನಿರ್ಮಾಣಕ್ಕೆ ಮುಖ್ಯ ವೇದಿಕೆ ಯಾಗಬೇಕು, ಸಂಸ್ಕೃತಿ ನಿರ್ಮಾಣ ಕಾರ್ಯದಲ್ಲಿ ಭಾರತೀಯ ಶಿಕ್ಷಣದ ಪಾತ್ರ ಅತ್ಯಂತ ಮಹತ್ವದ್ದು!" ಎಂದು ಅಭಿಪ್ರಾಯ ಪಟ್ಟಿದ್ದರು.

ಶಿಕ್ಷಣ ಮತ್ತು ಶಿಕ್ಷಕ ಮೌಲ್ಯಗಳಿಗೆ ಹೊಸ ಭಾಷ್ಯ ಬರೆದ ಅವರ ಶಿಕ್ಷಣದ ಕುರಿತ ತತ್ವಾದರ್ಶಗಳು ಅತ್ಯಂತ ಮೌಲಿಕವಾಗಿದ್ದು, ಅವುಗಳ ಕ್ರಿಯಾತ್ಮಕ ಆಚರಣೆಗೆ ಸರ್ಕಾರ ಇಂದು ಮುಂದಾಗಬೇಕಾದ ಅನಿವಾರ್ಯತೆ ಇದೆ.

ಶಿಕ್ಷಣ ಮತ್ತು ಸಂಸ್ಕೃತಿಗಳು ಒಂದೇ ನಾಣ್ಯದ ಎರಡು ಮುಖಗಳಾಗಿದ್ದು, ಒಂದಕ್ಕೊಂದು ಅವಿನಾಭಾವ ಸಂಬಂಧ ವಿದೆ. ಸಾಕ್ಷರತೆಗಿಂತ ಸಂಸ್ಕೃತಿ ಮನುಷ್ಯನಿಗೆ ಅತ್ಯಂತ ಅಗತ್ಯವಿದ್ದು, ಸಂಸ್ಕೃತಿಯನ್ನು ಕಲಿಸದಂತಹ ಶಿಕ್ಷಣ ನಿಜಕ್ಕೂ ಶಿಕ್ಷಣವೇ ಅಲ್ಲ! . ನಮ್ಮ ಇಂದಿನ ಎಲ್ಲಾ ಸಮಸ್ಯೆಗಳಿಗೆ ಸಂಸ್ಕೃತಿಯ ಕೊರತೆಯೇ ಮುಖ್ಯ ಕಾರಣವಾಗಿದೆ. ಸಂಸ್ಕೃತಿ ಪರಸ್ಪರ ಸ್ನೇಹ–ವಿಶ್ವಾಸದಿಂದ 'ಸರ್ವರಿಗೂ ಸಮಪಾಲು, ಸಮಬಾಳು' ಎಂಬ ನೀತಿ ಸೂತ್ರವನ್ನು ಕಲಿಸುತ್ತದೆ. ಸಮಾಜದ ಸುಖ–ಶಾಂತಿಗೆ ಸಂಸ್ಕೃತಿಯೇ ವೇದಿಕೆಯಾಗಿದ್ದು, ಶಿಕ್ಷಣ ಸಂಸ್ಕೃತಿಯನ್ನು ಕಲಿಸುವುದರತ್ತ ಹೆಜ್ಜೆ ಹಾಕಬೇಕು. ಒಂದು ರಾಷ್ಟ್ರವನ್ನು ಭವ್ಯ ಸಂಸ್ಕೃತಿಯಿಂದ ಅಲಂಕರಿಸುವಂತಹ ಒಂದು ಮಹಾನ್‌ಶಕ್ತಿ ನಮ್ಮ ಶಿಕ್ಷಕ ಸಮುದಾಯದಲ್ಲಿ ಅಡಗಿದ್ದು, ಶಿಕ್ಷಕ ಸಮುದಾಯ ಸಂಸ್ಕೃತಿಯ ಆರಾಧಕ ರಾಗುವುದರ ಮೂಲಕ ಸಂಸ್ಕೃತಿಯನ್ನು ಉಳಿಸಿ ಬೆಳೆಸುವ ಕಾರ್ಯದಲ್ಲಿ ದಿಟ್ಟ ಹೆಜ್ಜೆ ಹಾಕುವುದರ ಮೂಲಕ ಶಿಕ್ಷಕ ದಿನಾಚರಣೆಯನ್ನು ಅತ್ಯಂತ ಅರ್ಥಪೂರ್ಣಗೊಳಿಸಬೇಕು. ಶಿಕ್ಷಣ ಸಮುದಾಯ ದೌರ್ಬಲ್ಯದಿಂದ ಮುಕ್ತರಾಗಬೇಕು. ಹಣ ಮತ್ತು ವ್ಯಸನದ ಬೆನ್ನತ್ತಿ ಹೋಗದೇ ಅದರ್ಶದ ಬೆನ್ನತ್ತಿ ಸಮಾಜಕ್ಕೆ ಆದರ್ಶಪ್ರಾಯರಾಗಬೇಕು.

ಸಂಸ್ಕೃತಿ ಮತ್ತು ತತ್ವಜ್ಞಾನದ ಅರಿವು ನಮ್ಮ ಶಿಕ್ಷಕ ಸಮುದಾಯಕ್ಕೆ ಅತ್ಯಂತ ಅಗತ್ಯವಿದ್ದು, ಅವುಗಳ ಕ್ರಿಯಾತ್ಮಕತೆಗೆ ಅವರಿಂದು ಶ್ರಮಿಸಬೇಕಿದೆ. ಶಿಕ್ಷಕ ಸಂಸ್ಕೃತಿ ಮತ್ತು ತತ್ವಜ್ಞಾನದ ಪ್ರತಿರೂಪದಂತಿದ್ದಾಗ ಮಾತ್ರ ಪರಿಣಾಮಕಾರಿ ಶಿಕ್ಷಣ ಸಮಾಜದಲ್ಲಿ ಹೊರಹೊಮ್ಮಲು ಸಾಧ್ಯ. ಸಂಸ್ಕೃತಿ ಶಿಕ್ಷಕನಲ್ಲಿ ಮೂರ್ತ ರೂಪ ಪಡೆದಾಗ ಮಾತ್ರ ಒಂದು ಸಮಾಜ ಉತ್ತಮವಾಗಿ ರೂಪುಗೊಳ್ಳಲು ಸಾಧ್ಯ. ಹಾಗೆಯೇ ವಿದ್ಯಾರ್ಥಿ ಗಳು ಆದರ್ಶಪಥದಲ್ಲಿ ಸಾಗಲು ಸಾಧ್ಯ ಎಂಬುವುದನ್ನು ನಮ್ಮ ಶಿಕ್ಷಕ ಸಮುದಾಯ ಮನಗಾಣಬೇಕು.

❀

* ಸಹಶಿಕ್ಷಕಿ, ಪ.ಪೂ. ಕಾಲೇಜು, ಕಾಚಿನಕಟ್ಟೆ, ಶಿವಮೊಗ್ಗ ತಾ||.

# ಬದುಕಿನ ಉನ್ನತಿ–ಅವನತಿಗೆ ಕಾರಣರಾರು ?

– ಸ.ರಾ. ಸುಳಕೂಡೆ *

ಮನುಷ್ಯ ತೀವ್ರ ಗದ್ದಲ–ಗೊಂದಲದೊಳಗೆ ಸಿಲುಕಿಕೊಂಡಿದ್ದಾನಲ್ಲದೆ ಜೀವಸೃಷ್ಟಿಯನ್ನು ಅಳಿವಿನ ಅಂಚಿಗೂ ತರುವಲ್ಲಿ ನಿರತಗೊಂಡಿದ್ದಾನೆ. ತನ್ನ ಸ್ವಾರ್ಥ ಸಾಧನೆಗಾಗಿ, ಭೋಗ–ಭಾಗ್ಯಕ್ಕಾಗಿ ತನ್ನ ಸಹಚರರನ್ನು ಮತ್ತು ಸೃಷ್ಟಿಯನ್ನು ನಿರಂತರವಾಗಿ ದುರ್ಬಳಕೆ, ಮಾಡಿಕೊಳ್ಳುತ್ತಿದ್ದಾನೆ. ಸೃಷ್ಟಿಯು ಮಾನವನಿಗೆ ಸಕಲ ಸೌಕರ್ಯ–ಸೌಲಭ್ಯಗಳನ್ನು ಕೊಟ್ಟಿದ್ದರೂ ಕೊರತೆ–ಕೊರಗಿನೊಳಗೆ ನಿತ್ಯ ಹೊಸ–ಹೊಸ ಶೋಷಣೆಯ ದಾರಿಯನ್ನು ಮಾಡಿಕೊಳ್ಳುತ್ತಿದ್ದಾನೆ. ಮನುಷ್ಯನ ಆಸೆ–ಆಕಾಂಕ್ಷೆಗಳಿಗೆ ಮಿತಿಯೇ ಇಲ್ಲದಾಗಿದೆ. ಮಿತಿಯಿಲ್ಲದ ಆಸೆಯೊಳಗೆ, ಪ್ರಗತಿ, ಅನುಕೂಲ, ಸೌಕರ್ಯ, ಸಂಪರ್ಕವೆಂದು ಅರಣ್ಯ, ಪರಿಸರವನ್ನು ಮನ ಬಂದಂತೆ ಬಳಸುತ್ತಿದ್ದಾನೆ. ಹೆಚ್ಚಾದ ಜನಸಂಖ್ಯೆ ಎಲ್ಲ ಸಂಪನ್ಮೂಲಗಳನ್ನು ಬಳಸಿಕೊಂಡರೂ ತೃಪ್ತಿಗೊಳ್ಳದ ಸ್ಥಿತಿ ನಿರ್ಮಾಣಗೊಂಡಿದೆ. ಎಲ್ಲ ಸ್ತರದೊಳಗೆ ಮಾಲಿನ್ಯ, ಕೊರತೆ, ಹೊಸ ಹೊಸತನವೆಂದು ಇದ್ದ ಸೌಖ್ಯಕ್ಕೂ ಸಂಚಕಾರವನ್ನು ತಂದುಕೊಂಡಿದ್ದಾನೆ.

*ಸೃಷ್ಟಿ ಸೌಂದರ್ಯಕ್ಕೆ ಕಣ್ಣು ಕುರುಡಾಗಿಹವು;*
*ನೂರು ಮರಗಳ ನೂರು ಸ್ವರಗಳಿಗೆ ಕಿವಿ*
*ಕಿವುಡಾಗಿಹವು; ಬಿಲಿಯದೆ ಬರುವ ಪರಿಮಳಗಳಿಗೆ*
*ಮೂರು ಎರವಾಹಿಹುದು.*
*ಮಲಯಜದ ಮೃದು ಸ್ಪರ್ಶಕ್ಕೆ ತ್ವಚ*
*ಉರುಟಾಗಿಹುದು; ಸ್ವಾರೋಕ್ತಿ ಸವಿನುಡಿಗಳಿಗೆ*
*ನಾಲಿಗೆ ನಾಸ್ತಿ ಯಾಗಿಹುದು ಸದ್ಭಾವನೆಗಳಿಗೆ*
*ಹೃದಯ ಸುವಿಚಾರಗಳಿಗೆ ಚಿತ್ತ ಬತ್ತಿ ಹೋಗಿಹವು!*
*ಎಂಥ ಬರಡುತನ, ಕೊರಡುತನ*
*ಉರುಟುತನ, ಒರಟುತನ*
*ಬಂದಿತಯ್ಯ ಬಾಳಿಗೆ!*
*ಏನನೋದಿದೊಡೇನು, ಏನ ಪಡೆದೊಡೇನು...*
*ಇದೇ ಶುಷ್ಕತೆ, ರುಕ್ಷತೆ ರಿಕ್ತತೆಗಳೇನಯ್ಯ*
*ನಮ್ಮ ಪಾಲಿಗೆ? ತಿನ್ನುವ ಅನ್ನ, ಕುಡಿಯುವ ನೀರು*
*ಉಸಿರಾಡಿಸುವ ಗಾಳಿಗಳೇ ಮಲಿನವಾಗಿರುವಾಗ ಏಳಿಗೆಗೆ*
*ಅರ್ಥವೇನಯ್ಯ ಸ್ವತಂತ್ರಧೀರ ಸಿದ್ಧೇಶ್ವರಾ ?*

ಸೌಕರ್ಯ ಸಂಪರ್ಕ–ಮನರಂಜನೆಯ ಗೀಳಿನೊಳಗಿರುವ ಮನುಷ್ಯನು ಮಾನವೀಯ ಸಂವೇದನೆಯನ್ನು ಕಳೆದುಕೊಳ್ಳುತ್ತಿರುವುದರ ಜೊತೆಗೆ ತಿನ್ನುವ ಅನ್ನ, ಕುಡಿಯುವ ನೀರು, ಉಸಿರಾಡಿಸುವ ಗಾಳಿಯನ್ನು ಮಲಿನಗೊಳಿಸಿ ಕಂಡು ಕೇಳರಿದ ರೋಗ–ರುಜಿನಗಳಿಗೆ ತುತ್ತಾಗುತ್ತಿದ್ದಾನೆ. ಸಿಹಿ–ಸಿಹಿಯಾದ, ರುಚಿಕಟ್ಟಾದ ಆಹಾರವನ್ನು ಸೇವಿಸ ಲಾರದ ಸ್ಥಿತಿಯು ಮಾನವೀಯ ಮರುಕಗಳಲ್ಲಿ ಒಂದಾಗಿದೆ. ಪ್ರಜ್ಞಾವಂತರು, ಪರಿಸರದ ಕಾಳಜಿಯುಳ್ಳವರು ಮನುಕುಲದ ಬೇಜವಾಬ್ದಾರಿತನವನ್ನು ಎತ್ತಿ ತೋರಿಸಿದರೂ ಎಚ್ಚರಿಕೆಗೆ ಸ್ಪಂದಿಸಿರುವುದು ಅವಿವೇಕದ ಅವತಾರವೇ ಆಗಿದೆ.

ಮನುಷ್ಯ ಗುಡ್ಡಗಾಡು ಪ್ರದೇಶದೊಳಗೆ ಸ್ವಚ್ಛಂದವಾಗಿ ಇದ್ದ. ನಾಗರಿಕತೆಯ ಸೊಗಡಿನೊಳಗಾಗಿ ಆಲೋಚನೆಗಳ ತೆಕ್ಕೆಗೆ ಸಿಕ್ಕಿಕೊಂಡ ಮನುಷ್ಯ ಪಾಪ–ಪುಣ್ಯ, ಸತ್ಯ–ಅಸತ್ಯ, ಹಿಂಸೆ–ಅಹಿಂಸೆ, ಅದ್ವೈತೆ, ಗುರಿ, ಪ್ರಗತಿ, ಅಭಿವೃದ್ಧಿ, ಶೋಧ, ಸಂಶೋಧನೆ, ಅಂತರಂಗ–ಬಹಿರಂಗ ಶುದ್ಧಿ, ಆರೋಗ್ಯ, ಶಿಕ್ಷಣ, ವಿಜ್ಞಾನ ಎಲ್ಲವನ್ನು ಪರಾಮರ್ಶಿಸಿಕೊಳ್ಳುವಲ್ಲಿ ತರ್ಕ–ವಿತರ್ಕ ಬೆಳೆಸಿಕೊಳ್ಳುವಲ್ಲಿ ನಿರತನಾದ. ಇಂದು ಮನುಷ್ಯ ಏನೇನು ಪಡೆದುಕೊಂಡ, ಏನನ್ನು ಕಳಕೊಂಡ ಎನ್ನುವುದೆಲ್ಲವೂ ಉನ್ನತಿ ಮತ್ತು ಅವನತಿಯ ದೃಶ್ಯಗಳಲ್ಲಿ ರಾರಾಜಿಸುತ್ತಲಿದೆ. ಇಂದಿನ ಚಿಂತನೆಯೊಳಗೆ ಮನುಷ್ಯ ಮನುಷ್ಯತ್ವದ ವಿರುದ್ಧವೇ ಹೆಚ್ಚಿನ ಕಲಾಪಗಳನ್ನು ನಿಯೋಜಿಸುತ್ತಿದ್ದಾನೆ. ಸಕ್ರಿಯವಾಗಿ ಭಾಗವಹಿಸಲು ಉದ್ಯುಕ್ತನಾಗಿದ್ದಾನೆ. ಇದನ್ನೇ ಆಧುನಿಕ ವಚನಕಾರರಾದ ಸಿದ್ಧಯ್ಯ ಪುರಾಣಿಕರು ಹೀಗೆ ಹೇಳಿದ್ದಾರೆ–

*ಏನು ಪಡೆದೆವೆಂಬುದು ಮುಖ್ಯವಲ್ಲ ;*
*ಹೇಗೆ ದುಡಿದೆವೆಂಬುದು ಮುಖ್ಯವಯ್ಯ*
*ಏನು ನುಡಿದೆವೆಂಬುದು ಮುಖ್ಯವಲ್ಲ;*
*ಹೇಗೆ ನಡೆದೆವೆಂಬುದು ಮುಖ್ಯವಯ್ಯ*
*ಏನು ಗಳಿಸಿದೆವೆಂಬುದು ಮುಖ್ಯವಲ್ಲ;*
*ಹೇಗೆ ಬಳಸಿದೆವೆಂಬುದು ಮುಖ್ಯವಯ್ಯ*
*ಏನು ಕೇಳಿದೆವು, ಹೇಳಿದೆವೆಂಬುದು ಮುಖ್ಯವಲ್ಲ;*
*ಹೇಗೆ ಬಾಳಿದೆವೆಂಬುದು ಮುಖ್ಯವಯ್ಯ*
*ಸ್ವತಂತ್ರಧೀರ ಸಿದ್ಧೇಶ್ವರಾ*
*ಏನು ಗೆದ್ದೆವೆಂಬುದು ಮುಖ್ಯವಲ್ಲ*
*ಏನಾಗಿದ್ದೇವೆಂಬುದು ಮುಖ್ಯವಯ್ಯ!*

ಆಧುನಿಕ ಯುಗದೊಳಗೆ ಪೈಪೋಟಿಯು ಚಾಂಡಾಲತ್ವವನ್ನು ಹುಟ್ಟು ಹಾಕಿದೆ. ಬದುಕನ್ನೇ ಅಕ್ರಮ ಸ್ಥಿತಿಗೆ ತಂದಿರುವ ಪೈಪೋಟಿ ಜೀವಹರಣವನ್ನು ನಿತ್ಯದ ಮಾತಾಗುವಂತೆ ಮಾಡಿದೆ. ಮನುಷ್ಯ ಧರ್ಮವನ್ನು ಮೀರಿ ನಿಂತಿರುವ ಪೈಪೋಟಿ, ಅಹಂಕಾರ, ದರ್ಪ, ಮನುಷ್ಯ ಬದುಕಿನ ಕಂಟಕಗಳಾಗಿವೆ.

*ಬಿದ್ದುದು ತಪ್ಪಲ್ಲ*
*ಬಿದ್ದಲ್ಲಿಯೇ ಬಡವನಾಗಿ ಬಿದ್ದಿರುವುದು ತಪ್ಪಯ್ಯ*
*ಹುಟ್ಟಿದುದು ತಪ್ಪಲ್ಲ,*
*ಬಡವನಾಗಿಯೋ ಉಳಿಯುವುದು ತಪ್ಪಯ್ಯ*
*ಅಜ್ಞಾನಿಯಾಗಿ ಮೈದಾಳಿದುದು ತಪ್ಪಲ್ಲ*
*ಅಜ್ಞಾನಿಯಾಗಿಯೇ ಉಳಿಯುವುದು ತಪ್ಪಯ್ಯ*
*ಸ್ವತಂತ್ರಧೀರ ಸಿದ್ಧೇಶ್ವರಾ,*
*ಶೋಷಿತನಾಗಿ ಜನಿಸಿದುದು ತಪ್ಪಲ್ಲ*
*ಶೋಷಿತನಾಗಿಯೇ ಉಳಿಯುವುದು ತಪ್ಪಯ್ಯ!*

'ಶಕ್ತಿವಂತನಿಗೆ' ಬದುಕು ಎಂಬುದು ಸರ್ವಸಿದ್ಧಗೊಂಡ ಕಾಲದೊಳಗೆ ನಾವಿದ್ದರೂ ಬಿದ್ದವರನ್ನು ಒದೆಯುವ ಸಂಸ್ಕೃತಿಯಿಂದಲೂ ಪಾರಾಗುವ ಅಗತ್ಯವಿದೆ. ಈ ನಿಟ್ಟಿನಲ್ಲಿ ಶೋಷಿತರೂ ಉನ್ನತಿಗಾಗಿ ದುಡಿಯಬೇಕಿದೆ.

ಬಲಶಾಲಿಗಳನ್ನು ಗೆಲ್ಲಿಸುವುದೇ ಬದುಕಿನ ಮುಖ್ಯವಾಹಿನಿಯಾಗಿ ನಿಂತುಕೊಂಡಿದೆ. ದುಃಖಿತರು, ಕೃಷಿಕರು, ಕೃಷಿ ಕಾರ್ಮಿಕರು ಶೋಷಣೆಯ ಮಡಿಲಿನೊಳಗಿಂದ ಹೊರಬರಲಾರದಷ್ಟು ಬಿಗುವಿನ ವಾತಾವರಣ ಸೃಷ್ಟಿಯಾಗಿದೆ. ಮನುಷ್ಯ, ಕನಸು ಕಂಡಿರುವ ಸ್ವಾತಂತ್ರ್ಯ ಮತ್ತು ಸಮಾನತೆ, ಶೋಷಣೆ ರಹಿತ ಸಮಾಜ ನಿರ್ಮಾಣ ಸಾಧ್ಯವಾಗಬೇಕಾದರೆ ಸಕಲರೂ ಒಗ್ಗೂಡಿ ಒಂದಾಗುವ ಅಗತ್ಯ ಇಂದಿನದಾಗಿದೆ. ಇದನ್ನೇ ವಚನಕಾರ ಶೋಷಿತರು, ಶೋಷಿತರಾಗಿಯೇ ಉಳಿಯುವುದು, ಉಳಿಸುವುದು, ಪೋಷಿಸಿಕೊಂಡು ಹೋಗುವುದು ತಪ್ಪೆಂದು ಮಾರ್ಮಿಕವಾಗಿ ಹೇಳಿದ್ದಾರೆ. ಮನುಷ್ಯ ತನ್ನ ಕಾಲ ಮೇಲೆ ತಾನು ನಿಲ್ಲುವ ಯತ್ನವೆಂದರೆ ತನ್ನನ್ನು ತಾನು ಸಮರ್ಥನನ್ನಾಗಿಸುವುದಾಗಿದೆ. ತನ್ನ ಒಪ್ಪು ತಪ್ಪು ತಿಳಿದುಕೊಂಡು ಮುಂದೆ ಸಾಗುವುದೇ ಶೋಷಣೆ ತಪ್ಪಿಸಿಕೊಳ್ಳುವುದಾಗಿದೆ.

*ಹಲವು ಗೆಳೆಯರನ್ನು ಗಳಿಸಿಕೊಂಡೆನೆಂಬ ಹೆಮ್ಮೆ ನಿನಗೆ...*
*ಆದರೆ, ನಿನಗೆ ನೀ ಗೆಳೆಯನಾದೆಯಾ ಒಮ್ಮೆಯಾದರೂ,*
*ಓ ಜೀವಿ?*
*ಅವರಿವರು ಹಗೆಗಳಾದರೆಂದು ಹಲ್ಲು ಕಡೆಯುವೆ ಹಗಲೆಲ್ಲ*
*ಆದರೆ, ನಿನಗೆ ನೀನೇ ಹಗೆಯಾದುದೆಷ್ಟುಸಲವೆಂದು*
*ಲೆಕ್ಕ ಮಾಡಿದೆಯಾ ಒಮ್ಮೆಯಾದರೂ ಓ ಜೀವಿ!*
*ಅವರಿವರು ಮೋಸ ಮಾಡಿದರೆಂದು ರೋಸಿ ನುಡಿಯುವೆ ನಿತ್ಯ...*
*ಆದರೆ ನಿನಗೆ ನೀ ಮೋಸಗೊಳಿಸಿದುದು ಏಸು ಸಲವೆಂದು*
*ಎಣಿಸಿದೆಯಾ ಒಮ್ಮೆಯಾದರೂ ಓ ಜೀವಿ?*
*ನಿನ್ನ ಬನ್ನಗಳಿಗೆ ಅನ್ಯರು ಕಾರಣವೆಂದುಸುರುವೆ ಪ್ರತಿದಿನ..*
*ಆದರೆ, ನಿನ್ನ ಬಹುಪಾಲು ಭವಣೆಗಳಿಗೆ ನೀನೇ ಕಾರಣನೆಂಬುದ*
*ಜಾನಿಸಿದೆಯಾ ಒಮ್ಮೆಯಾದರೂ ಓ ಜೀವಿ? ಸ್ವತಂತ್ರಧೀರ ಸಿದ್ಧೇಶ್ವರನ*
*ಸಾಕ್ಷಿಯಾಗಿ ಹೇಳುವೆ,*
*ನಿನ್ನ ಉನ್ನತಿ–ಅವನತಿ ನಿನ್ನ ಕೈಯಲ್ಲಿಯೇ ಜೀವಿ!*

ಮನುಷ್ಯನು ವಿಚಾರವಂತ ಪ್ರಾಣಿ ಎಂಬುದು ಸರ್ವವಿಧ ದಿಂದಲೂ ಅರಿವಿಗೆ ಬಂದಿರುವ ಸಂಗತಿಯಾಗಿದೆ. ಈ ವಿಚಾರವಂತಿಕೆಯನ್ನು ತನ್ನನ್ನು ಅರಿತುಕೊಂಡು ಇನ್ನೊಬ್ಬರನ್ನರಿಯುವ ಹಂತಕ್ಕೆ ತಲುಪದಿರುವುದೇ ಅವನತಿಗೆ ಕಾರಣವೆಂಬುದು ವಚನಕಾರ ಸಿದ್ಧಯ್ಯ ಪುರಾಣಿಕರ ಸ್ಪಷ್ಟ ಅಭಿಪ್ರಾಯವಾಗಿದೆ.

ಮನುಷ್ಯನು ಗಳಿಸಿಕೊಳ್ಳುವುದಕ್ಕೆ ವಿಶ್ವವೇ ಆಕಾರಗೊಂಡಿದೆ. ಎಲ್ಲವನ್ನು ಗಳಿಸಿಕೊಂಡು ತನ್ನ ಮನಃಶಾಂತಿ, ಸೌಂದರ್ಯ ಕಳೆದುಕೊಂಡರೆ ಅದೇ ದೊಡ್ಡ ಅವನತಿಯಾಗುತ್ತದೆ. ಜಗತ್ತು ಇಂದು ವಿಶಾಲತೆಯ ದೃಷ್ಟಿಕೋನಕ್ಕೆ ಒಳಗಾಗದಂತೆ ತಡೆಯುವ ಹಲವು ಹುನ್ನಾರಗಳು, ಶೋಷಣೆಗಳೂ, ಅನಾಚಾರಗಳೂ ಕಾಳಗ–ಕಲಹಗಳು–ಕುಹಕಗಳು, ಭಯ–ಭಯೋತ್ಪಾದನೆಗಳು ಸೃಷ್ಟಿಗೊಳ್ಳುತ್ತಲಿವೆ. ಮನುಷ್ಯರನ್ನು ಕುಗ್ಗಿಸುವ ಕೆಲಸ–ಕಾರ್ಯಗಳಿಗೆ ಕುಮ್ಮಕ್ಕು ಕೊಡುವ ಬಹುವಿಧದ ಕೃತ್ಯಗಳು ಸಾಂಗ ಗೊಂಡಿವೆ. ಈ ಎಲ್ಲ ಹೇಯ ಕೃತ್ಯಗಳ ಹುನ್ನಾರಗಳನ್ನು ದಾಟಿ ಉನ್ನತಿಯತ್ತ ಸಾಗಬೇಕಾದರೆ ಪ್ರತಿಯೊಬ್ಬರೂ ವಿಜಯಿಗಳಾಗಬೇಕಿದೆ. ಇದೇ ಇಂದಿನ ಬದುಕಿನ ಮರ್ಮವೂ ಆಗಿದೆ.

* ನಂ., ೧೫೯, ಶ್ರೀ ಶಿವಪ್ರಸಾದ, ಶ್ರೀ ಬಸವೇಶ್ವರ ಬಡಾವಣೆ, ರಾಮತೀರ್ಥನಗರ, ಬೆಳಗಾಂ–೧೬.

# ರಾಷ್ಟ್ರ ಕಟ್ಟಿದ ಅಖಂಡತೆಯ ಹರಿಕಾರ

– ಹನುಮಂತ ಕ. ಈಟಿ *

ಇಂದ್ರನಂಥ ಪದವಿ ದೊರೆತರೆ ನಿರಾಕರಿಸುವವರು ಬಹಳ ವಿರಳ. ಸಂತಸದಲ್ಲಿ ಕುಣಿದಾಡುವವರೇ ಎಲ್ಲಾ. ಆದರೆ, ಈ ಮಾತಿಗೆ ಅಪವಾದವೆಂಬಂತೆ ತಾನಾಗಿಯೇ ದೇಶದ ಪ್ರಧಾನಿ ಪಟ್ಟ ಅರಸಿ ಬಂದರೂ ಅದನ್ನು ತ್ಯಾಗ ಮಾಡಿ ಧೀಮಂತ ವ್ಯಕ್ತಿತ್ವ ಸರ್ದಾರ್ ವಲ್ಲಭಭಾಯಿ ಪಟೇಲ್ ಅವರದ್ದು. ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರ ಒಂದೇ ಒಂದು ಮಾತಿಗೆ ಪ್ರತಿಯಾಡದೆ, ಪ್ರಧಾನಿ ಪಟ್ಟವನ್ನೇ ತ್ಯಾಗ ಮಾಡಿದ ಅಪರೂಪದ ತ್ಯಾಗಮೂರ್ತಿ ಸರದಾರ ವಲ್ಲಭಭಾಯಿ ಪಟೇಲರು.

ಉಪಪ್ರಧಾನಿ ಹಾಗೂ ಗೃಹಖಾತೆಯಂತಹ ಮಹತ್ತರವಾದ ಜವಾಬ್ದಾರಿ ನಿರ್ವಹಿಸಿದ ವಲ್ಲಭಭಾಯಿ ಪಟೇಲರು ದೇಶದ ಹಿತಕ್ಕಾಗಿ ತಾವು ತಳೆದ ಹಲವು ನಿರ್ಣಯಗಳು, ಯೋಜನೆಗಳಿಂದಾಗಿ ಅವರು ಉಕ್ಕಿನ ಮನುಷ್ಯ ಎಂಬ ಖ್ಯಾತಿಗೆ ಪಾತ್ರರಾದರು. ಈ ಮಧ್ಯೆ ಆಂಗ್ಲರ ಸಂಕೋಲೆಯಿಂದ ಭಾರತಮಾತೆಯನ್ನು ಬಿಡುಗಡೆಗೊಳಿಸಿದ ನಂತರ ಏಕತೆ ಮತ್ತು ಅಖಂಡತೆಗೆ ಮಾರಕವಾಗಿ ಪರಿಣಮಿಸಿದ್ದ ಸಂಸ್ಥಾನಿಕರನ್ನು ಮನವೊಲಿಸಲು ಮಾಡಿದ ಪ್ರಯತ್ನಗಳು ವಿಫಲವಾಗಿದ್ದವು. ಅಲ್ಲದೇ, ತಮ್ಮ ಪ್ರಭುತ್ವ ಸಾಧಿಸಿದ್ದ ನಿಜಾಮನನ್ನು ಸದೆಬಡಿಯುವಲ್ಲಿಯೂ ಕೂಡ ಪಟೇಲರ ಪಾತ್ರ ಬಹುಮುಖ್ಯ. ಪ್ರಮುಖರ ವಿರೋಧದ ನಡುವೆಯೂ ಮೊಂಡುತನ ಪ್ರದರ್ಶಿಸಿದ ನಿಜಾಮನ ವಿರುದ್ಧ ಯುದ್ಧ ಸಾರಿ ಹೈ.ಕ.ಪ್ರದೇಶಕ್ಕೆ ಮುಕ್ತಿ ದೊರಕಿಸಿಕೊಟ್ಟಿದ್ದು ಇತಿಹಾಸದ ಪುಟಗಳಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹುದು.

### ಬಾಲ್ಯ-ಶಿಕ್ಷಣ :

ವಲ್ಲಭಬಾಯಿಯುವರು ಗುಜರಾತ್‌ನ ಪೇಟ್ಲಾ ತಾಲ್ಲೂಕಿನ ಕರಮಸದ್ ಎಂಬಲ್ಲಿ ೧೮೭೫ ಅಕ್ಟೋಬರ್ ೩೧ರಂದು ಝುವೇರಾಭಾಯಿ ಮತ್ತು ಲಾಢಬಾಯಿ ದಂಪತಿಗಳ ಐವರು ಗಂಡುಮಕ್ಕಳಲ್ಲಿ ನಾಲ್ಕನೆಯರಾಗಿ ಜನಿಸಿದರು. ತಂದೆ ವೀರ ಸೇನಾನಿ(ಯೋಧ) ಬ್ರಿಟಿಷರ ವಿರುದ್ಧ ಹೋರಾಡಿದ ಮಹಾನ್ ದೇಶಭಕ್ತ. ದೇಶಪ್ರೇಮಿಯ ಹೊಟ್ಟೆಯಲ್ಲಿ ಹುಟ್ಟಿದ ವಲ್ಲಭಭಾಯಿಯವರ ರಕ್ತದಲ್ಲಿ ಅಪಾರ ದೇಶಪ್ರೇಮ ತುಂಬಿ ತುಳುಕುತ್ತಿತ್ತು. ಆದ್ದರಿಂದ ಹುಟ್ಟಿಂದಿನಿಂದಲೇ ಅವರು ಅಪ್ರತಿಮ ದೇಶಭಕ್ತರು. ಕೆಚ್ಚೆದೆಯ ಕಲಿ, ನ್ಯಾಯನಿಷ್ಠರೂ ಆದ ಅವರದ್ದು ತಮಗೆ ಸರಿ ತೋರಿದ್ದನ್ನು ಯಾವ ಅನುಮಾನವಿಲ್ಲದೆ ಮಾಡಿ ತೋರಿಸುವ ದಿಟ್ಟತನ. ಅನ್ಯಾಯದ ವಿರುದ್ಧ ಸಿಡಿದೇಳುವ ಪ್ರವೃತ್ತಿ. ಅದ್ಭುತ ಸಂಘಟನಾ ಶಕ್ತಿ.

ಕರಮಸದ್ ಮತ್ತು ನದಿಯಾದ್‌ಗಳಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಪೇಟ್ಲಾದಲ್ಲಿ ಮೆಟ್ರಿಕ್ಯುಲೇಷನ್ ಪೂರೈಸಿದ ಪಟೇಲರಿಗೆ, 'ಬ್ಯಾರಿಸ್ಟರ್' ಆಗಬೇಕೆಂಬ ಮಹಾದಾಸೆ. ಅದಕ್ಕಾಗಿ ಇಂಗ್ಲೆಂಡಿಗೆ ಹೋಗಬೇಕಾಗಿತ್ತು. ಮನೆಯಲ್ಲಿ ಕಡುಬಡತನವಿದ್ದ ಕಾರಣ ಸ್ವಂತವಾಗಿ ಓದಿ ವಕೀಲ ಪರೀಕ್ಷೆಯಲ್ಲಿ ತೇರ್ಗಡೆಯಾದರು. ವಕೀಲಿ ವೃತ್ತಿಯಿಂದ ಕೈತುಂಬ ಸಂಪಾದನೆ ಮಾಡಿ ಅತ್ಯುತ್ತಮ ನ್ಯಾಯವಾದಿಗಳೆಂಬ ಹೆಸರು ಗಳಿಸಿದರು. ಅಣ್ಣ ವಿಠಲಭಾಯಿಯವರಿಗೆ 'ಬ್ಯಾರಿಸ್ಟರ್' ಓದಲು ಮೊದಲು ಅವಕಾಶ ಮಾಡಿಕೊಟ್ಟು ಮೂರು ವರ್ಷಗಳ ನಂತರ ವಲ್ಲಭಭಾಯಿಯವರು ಇಂಗ್ಲೆಂಡಿಗೆ ಹೋಗಿ 'ಬ್ಯಾರಿಸ್ಟರ್' ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದು ಉತ್ತೀರ್ಣರಾಗಿ ಸ್ವದೇಶಕ್ಕೆ ಬಂದು ಅಹಮದಾಬಾದಿನಲ್ಲಿ ತಮ್ಮ 'ಬ್ಯಾರಿಸ್ಟರ್' ವೃತ್ತಿ ಆರಂಭಿಸಿದ್ದರು.

### ರಾಷ್ಟ್ರಪಿತನ ಸಾಮೀಪ್ಯಕ್ಕೆ :

ಗುಜರಾತ್‌ಗೆ ಗೋಧರಾದಲ್ಲಿ ಜರುಗಿದ ರಾಜಕೀಯ ಪರಿಷತ್ತಿಗೆ ಆಗಮಿಸಿದ ಗಾಂಧೀಜಿಯವರಿಗೂ ವಲ್ಲಭಭಾಯಿಯವರಿಗೂ ಪರಿಚಯವಾಗಿ ಸ್ನೇಹ ಬೆಳೆಯಿತು. ಖೇಡಾ ಜಿಲ್ಲೆಯಲ್ಲಿ ಅತಿವೃಷ್ಟಿಯಿಂದಾಗಿ ಹುಲುಸಾದ ಫಸಲು ನಾಶವಾಗಿ ರೈತರು ಸಂಕಷ್ಟಕ್ಕೆ ಸಿಲುಕಿದ್ದರು. ಸರಕಾರಕ್ಕೆ ಕಂದಾಯ ಕೊಡುವ ಸ್ಥಿತಿಯಿರಲಿಲ್ಲ. ಬ್ರಿಟಿಷ್ ಸರ್ಕಾರ ಕಂದಾಯವನ್ನು ಮನ್ನಾ ಮಾಡುವಂತೆಯೇ ಇರಲಿಲ್ಲ. ಆಗ ಪಟೇಲರು ರೈತರ ಗೋಳನ್ನು ಕಂಡು ಬ್ರಿಟಿಷರ ವಿರುದ್ಧ ಹೋರಾಟಕ್ಕಿಳಿದು ಉಗ್ರ ಸತ್ಯಾಗ್ರಹ ಮಾಡಿದರು. ಇದೇ ಅವರ ಮೊದಲನೆಯ ಹೋರಾಟ. ಬ್ರಿಟಿಷರ ಉಡುಪುಗಳನ್ನು ಬಿಸಾಕಿ ಖಾದಿಧಾರಿಗಳಾದರು. ಬಾರ್ಡೋಲಿಯಲ್ಲಿ ಸರಕಾರ ಒಮ್ಮೆಲೇ ಕಂದಾಯವನ್ನು ಹೆಚ್ಚಿಸಿದಾಗ ಉಗ್ರ ಹೋರಾಟ ಮತ್ತು ಸತ್ಯಾಗ್ರಹ ಮಾಡಿ 'ಬಾರ್ಡೋಲಿ ಸರದಾರ' ಎಂಬ ಬಿರುದು ಪಡೆದು 'ಸರದಾರ ವಲ್ಲಭಭಾಯಿ ಪಟೇಲ'ರಾದರು. ಇದರಿಂದ ಸ್ಫೂರ್ತಿ ಪಡೆದ ನಂತರ ಭಾರತ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು.

### ಹೆಗಲೇರಿದ ಜವಾಬ್ದಾರಿ

೧೯೪೮ರಲ್ಲಿ ಗಾಂಧೀಜಿಯವರು ಹಂತಕರ ಗುಂಡಿಗೆ ಬಲಿಯಾದರು. ದೇಶದ ಸೂತ್ರಧಾರಿಯಾದ ರಾಷ್ಟ್ರಪಿತರು ಇನ್ನಿಲ್ಲವಾದರು. ಆಗ ದೇಶದ ಬಹುದೊಡ್ಡ ಜವಾಬ್ದಾರಿಯನ್ನು ನೆಹರು ಮತ್ತು ಪಟೇಲರು ಹೊರು ವಂತಾಯಿತು. ಆಗಷ್ಟೇ ಸ್ವತಂತ್ರವಾದ ಭಾರತವು ಬಡತನ, ನಿರುದ್ಯೋಗ, ಅನಕ್ಷರತೆ, ಅಜ್ಞಾನ ಮತ್ತು ಮೂಢನಂಬಿಕೆ ಮುಂತಾದ ಗಂಭೀರ ಸಮಸ್ಯೆಗಳಿಂದ ಬಳಲುತ್ತಿತ್ತು. ದೇಶ ದಲ್ಲಿರುವ ೬೦೦ಕ್ಕೂ ಹೆಚ್ಚು ಇದ್ದ ದೇಶೀಯ ಅರಸರ ಆಡಳಿತವೇ ನಮ್ಮನ್ನು ಪರಕೀಯರ ದಾಸ್ಯಕ್ಕೆ ತಳ್ಳಿದ್ದಾಗಿದೆ. ಇನ್ನೊಮ್ಮೆ ಇದು ಮನರಾವರ್ತನೆಯಾಗಬಾರದು. ಈ ಸಂಸ್ಥಾನಗಳನ್ನು ಮತ್ತು ಅವುಗಳ ನಿರಂಕುಶ ಆಡಳಿತವನ್ನು ಮುಟ್ಟುಗೋಲು ಹಾಕಬೇಕೆಂದು ದೃಢಸಂಕಲ್ಪ ಮಾಡಿದರು. ದೇಶದಲ್ಲಿ ಅತಿ ದೊಡ್ಡದೆನಿಸಿದ ಹೈದರಾಬಾದ್ ಸಂಸ್ಥಾನ. ಇಲ್ಲಿ ನಿಜಾಮನ ದರ್ಪದ ಆಳ್ವಿಕೆ ಇತ್ತು. ತನ್ನ ಸಂಸ್ಥಾನವನ್ನು ವಿಲೀನಗೊಳಿಸುವುದಿಲ್ಲವೆಂದು ಹಠಹಿಡಿದ ಆತನ ಹಿಂದೆ 'ರಜಾಕರ' ಪುಂಡರ ದಂಡಿನ ಕಾಸೀಂ ರಜ್ವಿಯ ಬೆಂಬಲವಿದ್ದುದರಿಂದ ಬಹಳ ಎಗರಾಡುತ್ತಿದ್ದ. ಹೀಗಾಗಿ, ಕೊನೆಗೆ ಸೈನಿಕ ಕಾರ್ಯಾಚರಣೆಯು ಅನಿವಾರ್ಯವಾಯಿತು. ನಿಜಾಮನ ನೆತ್ತಿಗೇರಿದ ಪಿತ್ತವು ಜರ್‍ರೆಂದು ಇಳಿಯಿತು. ನಿಜಾಮನು ಪಟೇಲರಿಗೆ ಶರಣಾಗಿ ಶಾಂತಿ ಸಂಧಾನ ಕೋರಿದರು.

### ಒಕ್ಕೂಟ ರಚನೆ

ಭಾರತದ ಒಕ್ಕೂಟ ೧೯೪೮ರ ಸೆಪ್ಟೆಂಬರ್ ೧೬ರಂದು ರೂಪುಗೊಂಡಿತು. ಈ ಹಿಂದಿನ ಅರಸರಾದ ಚಂದ್ರಗುಪ್ತ, ಚಾಣಕ್ಯ, ಸಾಮ್ರಾಟ ಅಶೋಕ, ಚಾಲುಕ್ಯ, ಹೊಯ್ಸಳ ಮುಂತಾದವರು ಮಾಡಬಯಸಿದ 'ಅಖಂಡ ಭಾರತ ನಿರ್ಮಾಣ'ದ ಬಹು ಹಿಂದಿನ ಕಾಲದ ಕನಸು ಸರದಾರ ವಲ್ಲಭಭಾಯ್ ಪಟೇಲರಿಂದ ನೆರವೇರಿತು. ೧೯೫೦ ಜನವರಿ ೨೬ರಂದು ಭಾರತಕ್ಕೆ ಜುನಾಗಡ ಸೇರಿದಂತೆ ಸರ್ವತಂತ್ರ ಸ್ವತಂತ್ರ ಭಾರತವು ಪ್ರಜಾಪ್ರಭುತ್ವ ಗಣರಾಜ್ಯವಾಯಿತು. ಸುಮಾರು ೫೦೦೦ ವರ್ಷಗಳ ಸುದೀರ್ಘ ಕಾಲದ ಇತಿಹಾಸದ ಹಿನ್ನಲೆ ಇರುವ ಭಾರತೀಯರೆಲ್ಲರ ಹೆಮ್ಮೆಯ ಮಹಾನ್ ಬಲಿಷ್ಠ ರಾಷ್ಟ್ರವೊಂದು ಇಡೀ ಪ್ರಪಂಚದಲ್ಲಿಯೇ ತಲೆಯೆತ್ತಿ ನಿಂತಿತು. ಭಾರತದ ಒಕ್ಕೂಟ ರಚನೆ ಮಾಡಿದ ವಜ್ರಸಂಕಲ್ಪದ ಮಹಾ ಶಿಲ್ಪಿ ವಲ್ಲಭಾಯಿ ಪಟೇಲರು ನಿಜವಾಗಿಯೂ 'ಅಖಂಡ ಭಾರತದ ಒಕ್ಕೂಟ ರಚಿಸಿದ ಪಿತಾಮಹ', 'ರಾಷ್ಟ್ರ ಕಟ್ಟಿದ ನಾಯಕರು ಏಕತೆ ಅಖಂಡತೆಯ ಹರಿಕಾರರು ನಮಗೆಲ್ಲ ಅತ್ಯಂತ ಸ್ಮರಣೀಯರು. ತಮ್ಮ ೭೫ನೇಯ ವಯಸ್ಸಿನಲ್ಲಿ ೧೯೫೦ರ ಡಿಸೆಂಬರ್ ೧೫ರಂದು ಮುಂಬಯಿಯಲ್ಲಿ ಈ ದಿವ್ಯ ಚೇತನವು ನಮ್ಮನಗಲಿ ಹೋಯಿತು. ಆದರೆ, ಅವರ ದಿಟ್ಟ ನಿರ್ಧಾರಗಳು ಇಂದಿಗೂ ಪ್ರತಿಯೊಬ್ಬರಿಗೂ ಮಾರ್ಗದರ್ಶಕವಾಗಿರುವುದು ವಿಶೇಷ.

(ಕೃಪೆ : ಸಂಯುಕ್ತ ಕರ್ನಾಟಕ)

* ನಿವೃತ್ತ ಪ್ರೌಢಶಾಲಾ ಶಿಕ್ಷಕರು, ವಿದ್ಯಾನಗರ, ೫ನೇ ವಾರ್ಡ್, ಭಕ್ತಿ ಪ್ಲಾಟ್, ಕೆ.ಎಂ. ಕಾಲೇಜ್ ಹತ್ತಿರ, ಮುಧೋಳ-೫೮೭ ೩೧೩.

> ಕನ್ನಡ ಮನಸ್ಸು ವ್ಯವಹರಿಸುವ ಎತ್ತರವನ್ನು ವಚನಗಳು ಸೂಚಿಸುತ್ತವೆ. ಅಲ್ಲಮಪ್ರಭುವಿನ ದರ್ಶನವು ಕನ್ನಡವನ್ನು ವಿಶ್ವದ ಯಾವುದೇ ಭಾಷೆಯ ಜೊತೆಗಿಡಲು ಸಾಧ್ಯವಾಗುವಂತೆ ಮಾಡಿದೆ.
>
> – ಎಸ್. ನಟರಾಜು ಬೂದಾಳು.

# ಮೋಳಿಗಿ ಮಾರಯ್ಯನವರ ಜೀವನ ಮತ್ತು ಸಾಧನೆ

– ಡಾ. ರಾಜಶೇಖರ ಜಮದಂಡಿ *

೧೨ನೇ ಶತಮಾನವು ಕನ್ನಡ ನಾಡಿನಲ್ಲಿ ವಿಶಿಷ್ಟ ಸ್ಥಾನ ಪಡೆದಿದೆ. ಇದು ವಚನ ಸಾಹಿತ್ಯದ ಉಗಮಕ್ಕೆ ಕಾರಣವಾಗಿರುವುದಲ್ಲದೆ, ಜಗತ್ತಿನ ಮನುಕುಲದ ಕಲ್ಯಾಣಕ್ಕೆ ಸರ್ವ ರೀತಿ–ನೀತಿಯಿಂದಲೂ ಪೋಷಿತವಾಗಿದೆ. ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಹಿತ್ಯಿಕ ಮತ್ತು ಭಾಷಾ ಕ್ಷೇತ್ರಗಳಲ್ಲಿ ಈ ಶತಮಾನದ ವಚನಕಾರರು ಅದ್ವಿತೀಯ ಸಾಧನೆ ಮಾಡಿ ಪವಾಡ ಸದೃಶವಾದ ರೀತಿಯಲ್ಲಿ ಮೆರೆದವರು.

ಅದೇ ರೀತಿ ಕಲ್ಯಾಣವೆಂಬ ಪ್ರಣತಿಯಲ್ಲಿ ಬಸವಣ್ಣನೆಂಬ ಜ್ಯೋತಿ ಪ್ರಜ್ವಲಿಸುವಾಗ ಮೂಡಿದ ಶಿವಪ್ರಕಾಶದಲ್ಲಿ ನೂರಾರು ಶರಣ–ಶರಣೆಯರು ಕಂಗೊಳಿಸಿದರು. ಅಂದರೆ ನಾಡಿನ ಮತ್ತು ದೇಶದ ಮೂಲೆ ಮೂಲೆಗಳಿಂದ ರಾಜರು, ಅಧಿಕಾರಿಗಳು, ವಿದ್ವಾಂಸರು, ಕವಿಗಳು, ಸಮಾಜ ಸುಧಾರಕರು, ಮಹಾನುಭಾವಿಗಳು, ವಿವಿಧ ಕಾಯಕವುಳ್ಳವರು ಹೀಗೆ ಮೊದಲಾದ ಶರಣ–ಶರಣೆಯರು ಕಲ್ಯಾಣದೆಡೆಗೆ ಆಗಮಿಸಿದರು. ಬಸವಣ್ಣನವರ ನಡೆ–ನುಡಿಗಳಿಗೆ ಬೆರಗಾಗಿ ತಮ್ಮ ವ್ಯಕ್ತಿತ್ವವನ್ನು ಇನ್ನಷ್ಟು ವಿಕಸನಗೊಳಿಸುವ ನಿಟ್ಟಿನಲ್ಲಿ ಯಾವ ಸ್ಥಾನ–ಮಾನವನ್ನೂ ಲೆಕ್ಕಿಸದೆ ಕಲ್ಯಾಣದೆಡೆಗೆ ಆಗಮಿಸಿದರು. (ಉತ್ತಮ ಅಥವಾ ಆದರ್ಶ ಸಮಾಜ, ನಿರ್ಮಾಣದ ಪ್ರಕ್ರಿಯೆಗೆ ಅನೇಕರು ಕೈಜೋಡಿಸಲು ತನುಮನಧನದಿಂದ ಮುಂದಾದರು) ಉತ್ತಮ ಸಮಾಜವೆಂಬ ರಥವನ್ನು ಎಳೆಯಲು ತಮ್ಮ ತಮ್ಮ ಕೈಲಾದಷ್ಟು ಶಕ್ತಿಯನ್ನು ಅರ್ಪಿಸಿದರು. ಅಲ್ಲದೆ ಆ ಮೂಲಕ ತಮಗೆ ತಾವೇ ಒರೆಗೆ ಹಚ್ಚಿಕೊಂಡು ಸಂಭ್ರಮಿಸಿದರು.

ಹೀಗೆ ಕಲ್ಯಾಣ ನಾಡಿನ ಕೀರ್ತಿ ಸಹಜವಾಗಿ ಸುತ್ತ ನಾಲ್ಕು ದಿಕ್ಕಿಗೆ ಹರಡುತ್ತಿರುವಾಗ ಅಥವಾ ಹರಡಲು ಕಾರಣರಾದ ಅನೇಕ ಶರಣ–ಶರಣೆಯರ ಸಾಲಿನಲ್ಲಿ ಮುಂದಾಳತ್ವವನ್ನು ವಹಿಸಿಕೊಂಡವರು ಮಹಾತ್ಮ ಬಸವಣ್ಣನವರು. ಈ ಕೀರ್ತಿ ಪತಾಕೆಯನ್ನು ಕಣ್ಣಾರೆ ಕಂಡು, ಕಿವಿಯಾರೆ ಕೇಳಿದ್ದಲ್ಲದೆ ಇವರ ಜೀವನ ವೈಖರಿಗೆ ಮನಸೋತು ತಮ್ಮ ಜೀವನವನ್ನು ಪಾವನಮಯಗೊಳಿಸಿಕೊಳ್ಳುವ ಸಲುವಾಗಿ, ದೂರದ ಕಾಶ್ಮೀರ ದೇಶದ ಅರಸನಾದ ಮಹಾದೇವ ಭೂಪಾಲನೂ ಸಹ ಕಲ್ಯಾಣದೆಡೆಗೆ ಆಗಮಿಸಿದ್ದು ಒಂದು ರೀತಿಯಲ್ಲಿ ಆಶ್ಚರ್ಯವೇ ಸರಿ.

***ಕಾಶ್ಮೀರದ ಅರಸ :***

ಕಾಶ್ಮೀರ ದೇಶದ ಮಾಂಡವ್ಯಪುರದಲ್ಲಿ ಆಳ್ವಿಕೆಯನ್ನು ನಡೆಸುತ್ತಿದ್ದ ಮಹಾದೇವ ಭೂಪಾಲನು ಶಿವಭಕ್ತನಾಗಿದ್ದನು. ಈತನನ್ನು ಕಾಶ್ಮೀರದ ದೇಶಾಧಿಪತಿ, ಸವಾಲಕ್ಷ ದೇಶಾಧಿಪತಿ, ಮಾರವಿಭು ಎಂಬಿತ್ಯಾದಿ ಹೆಸರುಗಳಿಂದ ಕರೆಯಲಾಗಿತ್ತು. ಈತ ಬಸವಣ್ಣನವರ ಸಮಕಾಲೀನನಾಗಿದ್ದನಲ್ಲದೆ, ಸಮಾಜ ಸುಧಾರಣೆಯಲ್ಲಿ ಮುಂದಾಗಿದ್ದ. ಅಲ್ಲದೆ ಸದಾ ಶಿವಪೂಜೆ, ಶಿವಧ್ಯಾನದಲ್ಲಿ ನಿರತನಾಗಿ ದಿನನಿತ್ಯ ಅನೇಕ ಶಿವಭಕ್ತರಿಗೆ ಸಹಾಯ–ಸಹಕಾರಗಳನ್ನು ನೀಡುತ್ತಿದ್ದನು.

ಒಮ್ಮೆ ಮಹಾದೇವ ಭೂಪಾಲನು, ತನ್ನ ಅರಮನೆಯ ಸಮಸ್ತ ಜಂಗಮರಿಗೆ ದಾಸೋಹವನ್ನು ಏರ್ಪಡಿಸಿ ಅವರೆಲ್ಲರನ್ನೂ ಅತ್ಯಂತ ಭಕ್ತಿಯಿಂದ ಆಹ್ವಾನಿಸಿದ. ಆದರೆ ಆ ಜಂಗಮರೆಲ್ಲರೂ ಆತನ ದಾಸೋಹವನ್ನು ತಿರಸ್ಕರಿಸಿದರು. ಇದರಿಂದ ಬಹಳ ವಿಚಲಿತನಾದ ಮಹಾದೇವ ಭೂಪಾಲನು ಕಾರಣ ವೇನೆಂದು ಅವರಲ್ಲಿ ವಿಚಾರಿಸಿದನು. 'ಇದುವರೆಗೆ ನಾವು ತಿಳಿದೋ–ತಿಳಿಯದೆಯೋ ನಿನ್ನ ದಾಸೋಹವನ್ನು ಸ್ವೀಕರಿಸಿರಬಹುದು. ಆದರೆ ನೀನು ನೀಡುತ್ತಿರುವ ದಾಸೋಹವು ನೀನೇ ಸ್ವತಃ ಕಾಯಕ ಮಾಡಿ, ಬೆವರು ಸುರಿಸಿ, ದುಡಿದು ತಂದ ಪ್ರತಿಫಲದಿಂದಲ್ಲ. ಅದೆಲ್ಲಾ ಸಮಸ್ತ ಪ್ರಜೆಗಳದ್ದು ಅವರು ಗಳಿಸಿದ ಅಥವಾ ನಿನಗೆ ನೀಡಿದ ಹಣದಿಂದ ನಮಗೆ ದಾಸೋಹ ನೀಡುತ್ತಿರುವುದು ನಿನಗೆ ಉಚಿತವಲ್ಲ ಇದು ಸಲ್ಲದು, ಹಾಗಾಗಿ ನೀನೇ ಸ್ವತಃ ಕಷ್ಟಪಟ್ಟು ದುಡಿದು ನಂತರ ನೀನು ದಾಸೋಹ ನೀಡಿದರೆ ಮಾತ್ರ ನಾವು ಸ್ವೀಕರಿಸಲು ಸಿದ್ಧ' ಎಂದು ನುಡಿದರು. ಇದರಿಂದ ಭೂಪಾಲನು ಚಿಂತನೆ ಮಾಡತೊಡಗಿದನು. ಆಗ ಆತನ ಒಳಗಣ್ಣು ತೆರೆಯಿತು. ಜ್ಞಾನೋದಯವಾಯಿತು. ತಕ್ಷಣ ತನ್ನ ಸುಪ್ತಚೇತನವನ್ನು ಜಾಗೃತಗೊಳಿಸಿಕೊಂಡು ವೇಷಾಂತರದಿಂದ ಕಮ್ಮಾರ ಕೆಲಸವನ್ನು ಆಯ್ದುಕೊಂಡನು. ಅಲ್ಲಿ ನಿತ್ಯ ನಿರಂತರ ಕಾಯಕವೃತ್ತಿ ನಿರ್ವಹಿಸಿ ದಾಗ ಅದರಿಂದ ಸಂಪಾದನೆಯ ಪ್ರತೀಕವಾಗಿ ಕಬ್ಬಿಣದ ಚೂರೊಂದು ದೊರೆಯಿತು. ಅದನ್ನು ಮಾರಾಟ ಮಾಡಿ ಹಣ ಗಳಿಸಿದನು. ನಂತರ ಶಿವಭಕ್ತರಿಗೆ ತನ್ನ ಕಾಯಕ ವಿಷಯ ವನ್ನು ತಿಳಿಸಿ ಅವರನ್ನು ಮನೆಗೆ ಆಹ್ವಾನಿಸಿ ಅತ್ಯಂತ ಭಕ್ತಿ ಯಿಂದ ದಾಸೋಹ ಸೇವೆಯನ್ನು ಮಾಡಿದನು. ಆಗ ಆಗಮಿಸಿದ್ದ ಪ್ರತಿಯೊಬ್ಬ ಜಂಗಮ ಸಂತೃಪ್ತಿ ಹೊಂದುತ್ತ ಮಹಾದೇವ ಭೂಪಾಲನ ವ್ಯಕ್ತಿತ್ವಕ್ಕೆ ಮನಸೋತು ಪ್ರೀತಿಪೂರ್ವಕವಾಗಿ ಹಾಡಿ ಹೊಗಳಿದರು. ಇದಲ್ಲದೆ ಒಮ್ಮೆ ಹೀಗೆ ಕಾಯಕ ಸೇವೆಯಿಂದ ಪ್ರತಿಫಲವಾಗಿ ಬಂದಿದ್ದ ಕಬ್ಬಿಣದ ಚೂರೊಂದನ್ನು ಮಹಾದೇವ ಭೂಪಾಲನು ಜಂಗಮರಿಗೆ ನೀಡಿದಾಗ ಅದು ಅವರ ಕೈ ಸೋಕುತ್ತಲೇ ಬಂಗಾರ ವಾಯಿತಂತೆ. ಇದನ್ನು ಪ್ರತ್ಯಕ್ಷ ಕಂಡ ಭೂಪಾಲನು ತನ್ನ ಶ್ರಮದ ಶಕ್ತಿಗೆ ತಾನೇ ಮನಸೋತನಂತೆ. ಈ ಘಟನೆಯನ್ನು ನೋಡಿ ಆತನಲ್ಲಿ ಆ ಕ್ಷಣ ವೈರಾಗ್ಯದ ಭಾವನೆ ಮೂಡಿ ತೆಂಬುದಾಗಿ ಗೌರವಾಂಕನ 'ಮೋಳಿಗೆಯ್ಯನ ಪುರಾಣ'ದಲ್ಲಿ ಉಕ್ತವಾಗಿದೆ.

ಇತ್ತ ಕಲ್ಯಾಣದಲ್ಲಿ ಬಸವಣ್ಣನವರು ದಿನಾಲು ೧ ಲಕ್ಷ ೯೦ ಸಾವಿರ ಜಂಗಮರಿಗೆ ದಾಸೋಹ ಸೇವೆ ಮಾಡುತ್ತಿದ್ದರು. ಆದರೆ ಒಂದು ದಿನ ಇಷ್ಟೊಂದು ಸಂಖ್ಯೆಯ ಜಂಗಮರು ಆಗಮಿಸದಿದ್ದಾಗ, ಈ ಸುದ್ದಿ ದೂರದ ಕಾಶ್ಮೀರ ದೇಶದಲ್ಲಿದ್ದ ನೂರಾರು ಗಣಂಗಳಿಗೆ ತಿಳಿಯಿತು. ಇದೇ ಸಂದರ್ಭದಲ್ಲಿ ಬಸವಣ್ಣನವರು ಕಾಶ್ಮೀರ ದೇಶಕ್ಕೆ ಆಗಮಿಸಿ ತಮ್ಮ ಇಚ್ಛೆಯನ್ನು ಅಲ್ಲಿದ್ದ ಗಣಂಗಳಿಗೆ ತಿಳಿಸಿ ಅಲ್ಲಿಯೇ ದಾಸೋಹವನ್ನು ಅರ್ಪಿಸಿದರು. ಆಗ ಬಸವಣ್ಣನವರ ಈ ಘನವ್ಯಕ್ತಿತ್ವಕ್ಕೆ ಮಾರು ಹೋದ ಅನೇಕ ಗಣಂಗಳು ಸ್ವಇಚ್ಛೆಯಿಂದಾತನ ಹಿಂದೆ ಕಲ್ಯಾಣದೆಡೆಗೆ ಬರತೊಡಗಿದರು.

ಮುಂದೊಂದು ದಿನ ಮಹಾದೇವ ಭೂಪಾಲನು ಏರ್ಪಡಿಸಿದ್ದ ದಾಸೋಹದ ಸಂದರ್ಭದಲ್ಲಿ ಯಾವ ಗಣಂಗಳೂ ಬಾರದಿದ್ದಾಗ, ತನ್ನ ರಾಜ್ಯದ ಸುತ್ತ–ಮುತ್ತ ಹುಡುಕಾಡಿಸಿದನು. ಅವರು ಎಲ್ಲಿಯೂ ಕಾಣದಿದ್ದಾಗ ಮತ್ತು ಎಲ್ಲರೂ ಬಸವಣ್ಣ ನವರ ಕಾರ್ಯವೈಖರಿಗೆ ಮತ್ತು ದಾಸೋಹದ ಪ್ರೀತಿಗೆ ಮನ ಸೋತು ಕಲ್ಯಾಣಕ್ಕೆ ಹೋಗಿರುವ ವಿಚಾರ ತಿಳಿಯಿತು. ಇದರಿಂದ ಬಹು ಕುಪಿತನಾದ ಭೂಪಾಲನು ಬಸವಣ್ಣನವರು ತನಗೆ ವಂಚಿಸಿ ಇಲ್ಲಿರುವ ಜಂಗಮರನ್ನೆಲ್ಲಾ ಕಲ್ಯಾಣಕ್ಕೆ ಕರೆದೊಯ್ದಿದ್ದಾರೆಂದು ಭಾವಿಸಿಕೊಂಡು ಕಿಡಿಕಿಡಿ ಯಾಗಿ ಅವರನ್ನು ಕೊಲ್ಲಲು ಚೂರಿ ಅಥವಾ ಚೋರ ಚಿಕ್ಕಯ್ಯನನ್ನು ಕಳುಹಿಸಿ ಕೊಟ್ಟನು. ಆಗ ಬಸವಣ್ಣನವರನ್ನು ಕೊಲ್ಲಲು ಅತೀಕೋಪದಿಂದ ಬಂದಿದ್ದ ಚಿಕ್ಕಯ್ಯನಿಗೆ ಸ್ವತಃ ಬಸವಣ್ಣನವರು ಸ್ವಾಗತಿಸಿ ಆತಿಥ್ಯ ನೀಡುವರು. ಇದರಿಂದ ಸಂತುಷ್ಟಿಗೊಂಡ ಚಿಕ್ಕಯ್ಯ ಕಾಶ್ಮೀರವನ್ನೇ ಮರೆತರು. ಬಸವಣ್ಣನವರಲ್ಲಿದ್ದ ಶಾಂತಿ ಮತ್ತು ಪ್ರೀತಿಯ ನೋಟಕ್ಕೆ ಮನಸೋತು ಸಾಕ್ಷಾತ್ ಶಿವನೆಂದು ಭಾವಿಸಿಕೊಂಡು ಬಸವಣ್ಣನವರಿಗೆ ಕೈಮುಗಿಯುತ್ತಾ ಶಿರಸಾಷ್ಟಾಂಗ ನಮಸ್ಕಾರ ಮಾಡಿದನು. 'ತಪ್ಪೆನ್ನದು ಕ್ಷಮೆ ನಿಮ್ಮದು, ಇನ್ನು ಮುಂದೆ ಈ ರೀತಿ ತಪ್ಪು ಮಾಡಲಾರೆ. ನಾನೂ ಸಹ ನಿಮ್ಮಡಿಯ ಭಕ್ತನಾಗಿ ಮುಂದುವರೆಯುವೆನು ಹಾಗಾಗಿ ನನ್ನನ್ನು ಸಲಹಬೇಕೆಂದು' ಬೇಡಿಕೊಂಡನು. ಆನಂತರ ಬಸವಣ್ಣನವರ ಮನೆಯಲ್ಲಿ ನಿಜಲಿಂಗ ಚಿಕ್ಕಯ್ಯನಾಗಿ 'ಓಲೆಯ ಕಾಯಕ' ಮಾಡುತ್ತಾ ಕಲ್ಯಾಣದ ಮಹಾಮನೆಯಲ್ಲಿ ಅನುಭವ ಮಂಟಪದ ದಿವ್ಯ ಪರಿಸರದಲ್ಲಿ ಹೊಸ ಹುಟ್ಟು ಪಡೆಯುತ್ತಾನೆ.

ಇದೇ ಮಹಾದೇವ ಭೂಪಾಲನ ತಂಗಿಯಾದ ನಿಜದೇವಿಯೂ ಸಹ ಬಸವಣ್ಣನವರ ಕೀರ್ತಿಯನ್ನು ಕಿವಿಯಾರೆ ಕೇಳಿ ಆನಂದ ಹೊಂದಿ ವೈರಾಗ್ಯ ತಾಳಿದಳು. ನಂತರ ಬೊಂತೆ (ಕೌದಿ)ಯನ್ನು ಹೊದ್ದುಕೊಂಡು ಕಲ್ಯಾಣಕ್ಕೆ ಬರುತ್ತಾಳೆ. ಅವಳು ಕೌದಿಯನ್ನು ಹೊದ್ದುಕೊಂಡಿದ್ದರಿಂದ ಅವಳಿಗೆ ಮುಂದೆ ಬೊಂತಾದೇವಿಯೆಂಬ ನಾಮದಿಂದ ಮಹಾಶಿವಶರಣೆಯಾಗಿ ಬಾಳಿದಳು. ಈ ರೀತಿ ತನ್ನ ಜೀವನದಲ್ಲಿ ನಡೆದ ಚೋರ ಚಿಕ್ಕಯ್ಯ ಮತ್ತು ನಿಜದೇವಿಯವರಲ್ಲಿ ಆದ ಮನಃ ಪರಿವರ್ತನೆ ಮತ್ತು ಕಲ್ಯಾಣದ ಕೀರ್ತಿ ಕಂಡು ತನ್ನ ಐಹಿಕ ಜೀವನದಲ್ಲಿ ಜಿಗುಪ್ಸೆಯುಂಟಾಗಿ ಮಹಾದೇವ ಭೂಪಾಲನಿಗೆ ವೈರಾಗ್ಯ ಭಾವನೆ ಚಿಗುರತೊಡಗಿತು.

***ಕಲ್ಯಾಣಕ್ಕೆ ಆಗಮನ :***

ಕಲ್ಯಾಣದ ಬಸವಾದಿ ಶರಣರ ಮತ್ತು ಅಲ್ಲಿಯ ಜಂಗಮರ ಘನ ಮಹಿಮೆಯನ್ನು ತಿಳಿದುಕೊಂಡ ಮಹಾದೇವ ಭೂಪಾಲನು ತನ್ನ ಮಗನಾದ

* ಗುರುಕೃಪ ಎಂಟರ್‌ಪ್ರೈಸಸ್, ಅಗ್ರಹಾರಬೀದಿ, ಚಾಮರಾಜನಗರ – ೫೭೧ ೨೦೧.

ಲಿಂಗಾರತಿ(ಲಿಂಗರಾತಿ)ಗೆ ರಾಜ್ಯಾಧಿಕಾರ ನೀಡಿ ಪಟ್ಟ ಕಟ್ಟಿದನು. ನಂತರ ದೇಶ–ಕೋಶ ಗಳನ್ನು ತೊರೆದು, ಸಕಲ ಭೋಗ–ಭಾಗ್ಯಾದಿಗಳನ್ನು ದಾನ ಮಾಡಿ ಕಾಶ್ಮೀರ ದೇಶವನ್ನು ಬಿಟ್ಟು (ಪುರದ ಪುಣ್ಯಂ ಪುರುಷ ರೂಪಿಂದೆ ಪೋಗುತಿದೆ ಎಂಬಂತೆ) ಸಾಧಾರಣವಾದ ಉಡುಪಿ ನೊಂದಿಗೆ ಸುಪ್ರಸಿದ್ಧ ದಕ್ಷಿಣ ಭಾರತದ ಮಹಾನಗರವಾದ ಕಲ್ಯಾಣದತ್ತ ಪ್ರಯಾಣ ಹೊರಟನು. ಬಸವಣ್ಣನವರ ಪ್ರಭಾವ ಕ್ಕೊಳಗಾಗಿ ನಾನು ಬಂದೆನೆನ್ನುತ್ತ

*ಹಿಂದೆ ನೀ ಬಂದೆ ನಾನಾಭವಂಗಳಲ್ಲಿ*
*ನಾನಾ ವ್ಯಾಪಾರಕ್ಕೆ ನೀನೊಡೆಯನಾಗಿ*
*ಮರ್ತ್ಯದ ಸುಖದುಃಖ ನಿನಗೆ ನಿಶ್ಚಿಂತವಾಗಿರ್ಪುದು*

ಹಿಂದೆ ನಿನ್ನಂತೆ ನಾ ಬಂದು ನೊಂದುದಿಲ್ಲ. ಬಂದೆನಾ ಬಸವಣ್ಣನ ಕಥನದಿಂದೆ......

*ನಾ ತಂದ ಪದಾರ್ಥವೆಲ್ಲವ ನಿಮಗಿತ್ತೆ*
*ನಾ ನಿನ್ನಂಬುವೆ ಗುರುಲಿಂಗ ಜಂಗಮದಲ್ಲಿ ಪ್ರತ್ಯುತ್ತರಕ್ಕೆ*
*ಎನಗೆ ಮರ್ತ್ಯದ ಮಣಿಹ, ಕೃತ್ಯವಿನ್ನೆಷ್ಟು ದಿನ ಹೇಳಾ*
*ಅಂದು ನೀವು ಕೊಟ್ಟ ಒಪ್ಪದ ಚೀಟನೊಪ್ಪಿಸಿದೆ*
*ಮತ್ತೆ ಇನ್ನು ಸಂದೇಹವೆ, ಹೇಳಾ ನಿಃಕಳಂಕ*
*ಮಲ್ಲಿಕಾರ್ಜುನ (೭೦೭)*

ಅಂದರೆ ಬಸವಣ್ಣನ ಜೀವನ ವೃತ್ತಾಂತ ಕೇಳಿ ಕಲ್ಯಾಣಕ್ಕೆ ಭೂಪಾಲನು ಬಂದಿರುವುದಾಗಿ ಎಂಬುದು ಮೇಲಿನ ವಚನ ದಿಂದ ತಿಳಿದು ಬರುತ್ತದೆ.

ಈ ಘಟನೆಯನ್ನೆಲ್ಲಾ ಕಣ್ಣಾರೆ ಕಂಡ ಮಹಾದೇವ ಭೂಪಾಲನ ಸಹಧರ್ಮಿಣಿಯಾದ ರಾಣಿ ಗಂಗಾ ದೇವಿಯೂ ಸಹ ಎಳಗಾವಿಯನ್ನು ಉಟ್ಟು ಪತಿಯೊಡನೆ ಕಲ್ಯಾಣದೆಡೆಗೆ ಹೊರಟಳು. ಹೀಗೆ ಈ ದಂಪತಿಗಳು ಅತ್ಯುತ್ಸಾಹದಿಂದ ಕಲ್ಯಾಣ ಪ್ರದೇಶಕ್ಕೆ ಆಗಮಿಸಿ, ಅಲ್ಲಿ ಕಟ್ಟಿಗೆಯ ಕಾಯಕ ಆಯ್ದುಕೊಂಡರು.

ಮಡಿವಾಳಯ್ಯನ ಬಟ್ಟೆ ಚಂದಯ್ಯನ ಹುಲ್ಲು, ಸಿದ್ಧರಾಮನ ಕೆರೆಯ ಕಾಯಕದಂತೆ ಮಹಾದೇವ ಭೂಪಾಲನು ಭಕ್ತಿಯಿಂದ ಕಾಡಿಗೆ ಹೋಗಿ ಕಟ್ಟಿಗೆಯನ್ನು ಆಯ್ದುಕೊಳ್ಳುವ ಮತ್ತು ಮಾರಾಟ ಮಾಡುವ ಅದೇ ಕಾಯಕದಲ್ಲಿ ನಿರತನಾಗಿ ಕಲ್ಯಾಣದಲ್ಲಿ ಹೊಸ ಜೀವನ ಆರಂಭಿಸಿದನು. ಆಗ ಇದೇ ಸಂದರ್ಭದಲ್ಲಿ ಅವರಿಬ್ಬರೂ ಹೆಸರು ಬದಲಾಯಿಸಿಕೊಂಡು ಮೋಳಿಗೆ ಮಾರಯ್ಯ ಮತ್ತು ಮೋಳಿಗೆ ಮಹಾದೇವಿ ಎಂಬ ನಾಮಾಂಕಿತ ದೊಂದಿಗೆ ಹೊಸ ಸಂಸಾರ ಜೀವನ ನಡೆಸತೊಡಗಿದರು. ಇಲ್ಲಿ ಬಸವಣ್ಣನೆಂಬ ಜ್ಞಾನ ಜ್ಯೋತಿಯ ಬೆಳಗಿನಲ್ಲಿ ಇವರೂ ಸಹ ಪ್ರಕಾಶಮಾನವಾಗಿ ಬೆಳಗುತ್ತಾ ತಮ್ಮ ಜೀವನವನ್ನು ಪಾವನಮಯಗೊಳಿಸಿಕೊಂಡರು. ಶಿವಾನುಭವ ಜ್ಞಾನಿಗಳಾಗಿ ಕಲ್ಯಾಣನಾಡಿನಲ್ಲಿ ಕೀರ್ತಿವಂತ ರಾದರು. ಹೀಗೆ ಕಲ್ಯಾಣದ ಹೊರವಲಯದಲ್ಲಿ ಗುಡಿಸಲೊಂದನ್ನು ಕಟ್ಟಿಕೊಂಡು ಜೀವಿಸುತ್ತಿದ್ದ ಮಾರಯ್ಯ ಮತ್ತು ಮಹಾದೇವಿಯವರು ತಮ್ಮ ನಿತ್ಯ ಕಾಯಕದಿಂದ ಬಂದ ಪ್ರತಿಫಲದಿಂದ ಜಂಗಮರಿಗೆ ಅಂಬಲಿಯನ್ನು ದಾಸೋಹ ರೂಪದಲ್ಲಿ ಅರ್ಪಿಸುತ್ತಿದ್ದರು.

ಮಾರಯ್ಯ ದಂಪತಿಗಳು ನೀಡಿದ ಅಂಬಳಕ ಅಥವಾ ಅಂಬಲಿಯ(ಮೊಸರನ್ನ) ರುಚಿಯ ಬಗೆಗೆ ಜಂಗಮರು ಅತಿಶಯವಾಗಿ ಕೊಂಡಾಡುತ್ತಿದ್ದ ವಿಷಯ ಒಬ್ಬರಿಂದೊಬ್ಬರ ಮೂಲಕ ಹರಿದು ಬಸವಣ್ಣನವರ ಕಿವಿಗೂ ಒಮ್ಮೆ ಬಿತ್ತು. 'ನಿಷ್ಠೆಯಿಂದ ಲಿಂಗವ ಪೂಜಿಸಿ ಮತ್ತೊಂದು ಶರಣರು ಸರ್ಪನ ಹೆಡೆಯ ಮಾಣಿಕ್ಯದಂತಿಪ್ಪರು ಭೂಷಣರಾಗಿ, ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು ಕೂಡಲ ಸಂಗಮದೇವಾ ನಿಮ್ಮ ಶರಣರು' ಎಂದು ಬಸವಣ್ಣನವರು ಅವರನ್ನು ಹಾಡಿ ಹೊಗಳಿದರು. ಇಂತಹ ಶಿವಭಕ್ತರ ಮನೆಯಲ್ಲಿನ ಮಹಾಪ್ರಸಾದವನ್ನು ಸ್ವೀಕರಿಸಿದರೆ ಸಮಸ್ತ ಪಾಪಗಳು ನಿವಾರಣೆಯಾಗುತ್ತವೆಂದು ಭಾವಿಸಿಕೊಂಡರು. ಇಂಥ ಭಕ್ತರ ಮನೆಯನ್ನು ಅನ್ನ–ನೀರನ್ನು ಬೇಡಿ ಉಂಡರೆ ಸಮಸ್ತ ಪಾಪವೂ ಪರಿಹಾರವಾಗುತ್ತದೆಂದು ಬಸವಣ್ಣನವರು ಕೊಂಡಾಡಿದರು. 'ಯಾವ ಮಹಾಪಾತಕವನ್ನು ಮಾಡಿದವನಿರಲಿ ಅವನು ಇಂಥ ಭಕ್ತರ ಮನೆಯಲ್ಲಿ ಉಂಡು ಚೆಲ್ಲಿದ ಪ್ರಸಾದ ವನ್ನು ಆಯ್ದು ತಿಂದರೆ ಅವನ ಬ್ರಹ್ಮ ಹತ್ಯಾದಿ ಪಾಪ ಪರಿಹಾರವಾಗುವುದು. ಯಾವನಿಗಾದರೂ ಪಾಪ ಬುದ್ಧಿ ಕಾಡುತ್ತಿದ್ದರೆ ಇಂಥ ಸದ್ಭಕ್ತರ ಮನೆಯ ನೀರನ್ನಾದರೂ ಕುಡಿದರೆ ಪಾಪ ಪರಿಹಾರವಾದೀತು' ಎನ್ನುತ್ತಾ ಮನದಲ್ಲಿ ಮೋಳಿಗೆ ಮಾರಯ್ಯನಿಗೆ ನಮೋ ನಮೋ ಎಂದು ದೂರದಿಂದಲೇ ನಮಸ್ಕರಿಸಿದರು. ಅದೇ ರೀತಿ ಒಮ್ಮೆ ಮೋಳಿಗಿ ಮಾರಯ್ಯನು ಮನೆಯಲ್ಲಿಲ್ಲದಾಗ ಮನೆಯನ್ನು ಹೊಕ್ಕರು. ಅಲ್ಲಿ ಆತನ ಮಡದಿಗೆ ನಮಸ್ಕರಿಸಿ, ಅವರು ನೀಡಿದ ಅಂಬಲಿ ಮತ್ತು ಆತಿಥ್ಯವನ್ನು ಮನಸಾರೆ ಭಕ್ತಿಯಿಂದ ಸ್ವೀಕರಿಸಿದರು.





***ಕೊನೆಯ ದಿನಗಳು :***

ಮಾರಯ್ಯ ದಂಪತಿಗಳು ಲಿಂಗಾಂಗ ಸಮರಸದ ದಿವ್ಯಾನುಭವವನ್ನು ಹೊಂದಿ ಸರ್ವಾಂಗ ಲಿಂಗದ ನಿಜ ನಿಲುವಿನಲ್ಲಿ ನಿಂದರು. ಕಲ್ಯಾಣದ ನೆನಹು ಅವರಿಗೆ ಮತ್ತೆ ಮತ್ತೆ ಕಣ್ಮುಂದೆ ಬರುತ್ತಿತ್ತು. ಕಲ್ಯಾಣವು ಬಿಜ್ಜಳನ ಕ್ರಾಂತಿಯಿಂದ ಪಾಪಿಗಳ ನೆಲೆಯಾಗಿತ್ತು. ಈ ಸುದ್ದಿಯನ್ನು ಕಲ್ಯಾಣದಿಂದ ಬಂದವರು ಮಾರಯ್ಯನ ಮುಂದೆ ಅರುಹಿದಾಗ ಮಾರಯ್ಯ ಚಿಂತಾಕ್ರಾಂತನಾಗಿ ಹಿಂದಿನ ಕಲ್ಯಾಣವನ್ನು ನೆನೆದು ಮತ್ತೊಂದು ಕಲ್ಯಾಣದಲ್ಲಿ ಅರುಣೋದಯ ಬೆಳಗುವುದೋ? ಪುಣ್ಯದ ಬೀಡಾಗಿ ಮತ್ತೊಂದು ಕಂಗೊಳಿಸುವುದೋ? ಎಂದು ಹಲುಬಿದನು.

ತಮ್ಮಲ್ಲಿ ತಾವೇ ಬೆರೆತ ಕಾಯಕದಿಂದ ಪರಿಶುದ್ಧವಾದ ಅಂಗಲಿಂಗವಾಗಿ ನೂರಿಪ್ಪತ್ತು ವರ್ಷ ತುಂಬು ಜೀವನವಾಗಿ ಬಾಳಿದ ಮಾರಯ್ಯ ಬೆಳಗಿನಲ್ಲಿ ಬೆಳಗಾದ ಸ್ವರೂಪವನ್ನು ಮಹಾದೇವಿಯನ್ನು ಕಂಡ ನಿಲುವು ಇದು. ಇದರಲ್ಲಿ ಈ ತಾಯಿಯ ಅಂತಿಮ ನಿಲುವೂ ಕಾಣುತ್ತೇವೆ. 'ಸತಿಪತಿ ಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎನ್ನುವ ವಚನ ಸಾಕಾರ ರೂಪವಾಗಿ ಬಾಳಿದವರು. ಸತ್ಯಶುದ್ಧಕಾಯಕ, ನಿಸ್ವಾರ್ಥ ಜೀವನ, ಪರಮ ಸದಾಚಾರ, ಸದ್ಭಕ್ತಿಯ ನಿಲುವು, ಶುದ್ಧ ಶಿಸ್ತು, ಸಂಯಮದ ವ್ಯಕ್ತಿತ್ವ ಹೊಂದಿದ ಮಾರಯ್ಯನ ಬಗ್ಗೆ ಮಾತಾಡುವಾಗಲಿಲ್ಲ ನಮ್ಮ ಕಣ್ಣೆದುರಿಗೆ ಮೂಡುವುದು ಆತನ ಮಹಾಜೀವನದ ಸಾಕ್ಷ್ಯಚಿತ್ರ!

ಮೋಳಿಗಿ ಮಾರಯ್ಯನ ಜೀವನ ಚರಿತೆಯನ್ನು ತಿಳಿಯಲು, ಸಾಧನಾ ಸಂಪತ್ತು ಎಷ್ಟಿದ್ದರೂ ಸತ್ಯಶುದ್ಧವಾದ ಆತನ ಸಂಪೂರ್ಣ ಐತಿಹಾಸಿಕ ಜೀವನವನ್ನು ಒಂದಿಲ್ಲೊಂದು ವಿಧವಾಗಿ ತಿಳಿಸುವ ಹಲವಾರು ಕವಿಗಳು, ಪುರಾಣಕಾರರು, ಚರಿತೆಕಾರರು ಕಂಡೇ ಕಾಣುತ್ತಾರೆ. ವಚನಸಾಹಿತ್ಯವನ್ನು ಕೂಲಂಕಷವಾಗಿ ಅಭ್ಯಾಸ ಮಾಡದೇ ಇಂಥ ಶರಣರ ಜೀವನ ಚರಿತೆಯನ್ನು ನಿಚ್ಚಳವಾಗಿ ಅರಿಯಲು ಸಾಧ್ಯವಿಲ್ಲ.

ಎಲ್ಲ ಶರಣರಂತೆ ಒಂದೇ ಸಂಪ್ರದಾಯಕ್ಕೆ ಕಟ್ಟುಬಿದ್ದ 'ನಿಃಕಳಂಕ ಮಲ್ಲಿಕಾರ್ಜುನಾ' ಎಂಬ ವಚನಾಂಕಿತವನ್ನಿಟ್ಟು ಬರೆದಿರುವ ಈತನ ವಚನಗಳು ಕನ್ನಡ ಸಾಹಿತ್ಯ ಪ್ರಪಂಚ ಕ್ಕೊಂದು, ಅಪೂರ್ವವಾದ ಕೊಡುಗೆಗಳಾಗಿವೆ. ಈವರೆಗೆ ಮಾರಯ್ಯನ ೮೨೦ ವಚನಗಳು ಮಹಾದೇವಿಯಮ್ಮನ ೬೯ ವಚನಗಳು ಲಭ್ಯವಾಗಿವೆ. ಅಂದಿನ ಸಮಕಾಲೀನತೆಗೆ ಸಂಬಂಧಿಸಿದಂತೆ ಮಾರಯ್ಯನು ಬರೆದ ಅಸಂಖ್ಯಾತ ವಚನಗಳು ಪ್ರಸ್ತುತ ಸಂದರ್ಭದಲ್ಲಿನ ಸ್ವರೂಪವನ್ನು ಪಡೆದುಕೊಂಡಿವೆ. ಆತನ ವಚನಗಳ ಸಾರವನ್ನರಿಯುವುದಕ್ಕೆ ವಿಶೇಷ ಅಧ್ಯಯನದ ಆಸಕ್ತಿ ಮತ್ತು ಆಳವಾದ ಜ್ಞಾನ ಸಂಪತ್ತು ಬೇಕೆಂಬುದು ಆತನ ವಚನಗಳು ಓದಿದಾಗ ಅನುಭವ ವಾಗುತ್ತದೆ.

❀

# ವ್ಯಕ್ತಿತ್ವ ವಿಕಸನಕ್ಕೆ ಅಧ್ಯಯನವೇ ಮುಖ್ಯ

– ಡಾ. ಆರ್.ಬಿ. ಚಿಲುಮಿ *

**ಮಾ**ನವನು ಹಸಿವಾದಾಗ ಅದೆಷ್ಟು ಅನ್ನಕ್ಕಾಗಿ ಹಪಹಪಿಸುತ್ತಾನೆಯೋ ಹಾಗೆಯೇ ಜ್ಞಾನ ಸಂಪಾದನೆಗಾಗಿ ಹಪಹಪಿಪಡುತ್ತಿರಬೇಕು. ಇಂದಿನ ಆಧುನಿಕ ಬಿ.ಟಿ. ಕಂಪ್ಯೂಟರ್, ಲ್ಯಾಪ್‌ಟಾಪ್‌ಗಳ, ಮೊಬೈಲ್‌ಗಳ ಯುಗವಾದುದ ರಿಂದ ಅವುಗಳತ್ತ ಇಂದಿನ ಯುವಶಕ್ತಿ ಮುಖ ಮಾಡಿರುವುದು ಕಂಡು ಬರುತ್ತದೆ. ಇದು ತಪ್ಪೇನಲ್ಲವಾದರೂ ಜ್ಞಾನಾರ್ಜನೆಯತ್ತ ತಾತ್ಸಾರ ಮಾಡುತ್ತಿರುವುದಂತೂ ಸತ್ಯ. ದೂರದರ್ಶನಗಳೇ, ಮೊಬೈಲ್‌ಗಳೇ ತಮ್ಮ ಬಾಳಸಂಗಾತಿಗಳನ್ನಾಗಿಸಿಕೊಂಡು ಪುಸ್ತಕ ಪ್ರಪಂಚವನ್ನೇ ಮರೆಯುತ್ತಿರುವುದು ಶೋಚನೀಯ. ಹಸಿವಿನ ತೀವ್ರತೆಗಾಗಿ ಹೇಗೆ ಹಂಬಲಿಸುತ್ತೇವೆಯೋ ಹಾಗೆಯೇ ಪುಸ್ತಕದ ಓದುವ ತೀವ್ರತೆಯ ಕಡೆಗೆ ಗಮನವೀಯುವುದು ಅಷ್ಟೇ ಅಗತ್ಯವಾಗಿದೆ. ಮಹಾತ್ಮಾ ಗಾಂಧೀಜಿಯವರು ಪುಸ್ತಕಗಳೇ ನನ್ನ ನೆಚ್ಚಿನ ಗೆಳೆಯರು ಎಂದಿದ್ದಾರೆ. ಹೌದು ಜ್ಞಾನದಾಹಿಗೆ ಪುಸ್ತಕ ಗಳೇ ಸಂಗಾತಿಗಳು. ಜಗತ್ತನ್ನೇ ಬದಲಾಯಿಸುವ ಶಕ್ತಿ ಪುಸ್ತಕಗಳಲ್ಲಿವೆ. ಆದರೆ ಅದು ಕಾರ್ಯರೂಪಕ್ಕೆ ಬರಬೇಕಾದರೆ ಪುಸ್ತಕದ ಜ್ಞಾನ ಮಸ್ತಕಕ್ಕೆ ಬರಬೇಕು. ಓದುವುದರಿಂದ ಓದುವ ಆಸಕ್ತಿಯನ್ನು ವೃದ್ಧಿಸಿಕೊಳ್ಳುತ್ತಿರುವಂತೆಯೇ ಹೊಸ ಹೊಸ ಆವಿಷ್ಕಾರಗಳನ್ನು ಕಂಡು ಹಿಡಿಯಲು ಸಾಧ್ಯವಾಗುತ್ತದೆ. ಆತನೇ ಮುಂದೊಂದು ದಿನ ವಿಜ್ಞಾನಿಯಾಗಬಲ್ಲ. ಹೆಚ್ಚು ಹೆಚ್ಚು ಓದಿದಷ್ಟು ನಮ್ಮಲ್ಲಿರುವ ಅಜ್ಞಾನವೂ ದೂರವಾಗಿ, ಆ ನಮ್ಮಲ್ಲಿ ಅರಿವು ಅರಳುತ್ತದೆ. ಓದು ಒಕ್ಕಾಲು ಬುದ್ಧಿ ಮುಕ್ಕಾಲು ಎಂಬ ಪ್ರಸಿದ್ಧ ಗಾದೆಯಿದೆ. ಪುಸ್ತಕಗಳೇ ಗುರುಗಳು, ಮಾರ್ಗದರ್ಶಕರು.

ಓದಿನಿಂದ ಜ್ಞಾನ ವಿಕಾಸವಾಗುತ್ತದೆ. ಜ್ಞಾನವು ಮಾನವ ವಿಕಾಸದ ಮೂಲ. ಪುಸ್ತಕಗಳು ಅಥವಾ ಗ್ರಂಥಗಳು ಈ ಜ್ಞಾನವನ್ನು ಒಂದು ಸಂತತಿಯಿಂದ ಮತ್ತೊಂದು ಸಂತತಿಗೆ, ಪ್ರಪಂಚದ ಒಂದು ದಿಕ್ಕಿನಿಂದ ಹಲವಾರು ದಿಕ್ಕುಗಳಿಗೆ ಕರೆದೊಯ್ಯುವ ವಾಹಕಗಳು. ಗ್ರಂಥಗಳ ಮಹತ್ವ ಹಿಂದಿನಿಂದ ಇಂದಿನವರೆಗೂ ಅಜರಾಮರವಾಗಿದೆ. ಸದಾ ಅಭಿವೃದ್ಧಿಯಲ್ಲಿರುವ ಮಾನವನಿಗೆ ಗ್ರಂಥಗಳು ಕೇವಲ ಜ್ಞಾನವಾಹಕಗಳಾಗಿರದೆ ಆತನ ಜೀವನದ ಸಂಗಾತಿ, ಸನ್ಮಿತ್ರ ಹಾಗೂ ಸರ್ವಸ್ವಗಳಾಗಿವೆ. 'ನಹಿ ಜ್ಞಾನೇನ ಸದೃಶಂ' ಅಂದರೆ ಜ್ಞಾನಕ್ಕಿಂತಲೂ ಮಿಗಿಲಾದ ವಸ್ತು ಶ್ರೇಷ್ಠವಾದುದು ಮತ್ತಾವುದೂ ಇಲ್ಲ. ಜ್ಞಾನ ಹೆಚ್ಚಿಸಿಕೊಳ್ಳಲು ಪುಸ್ತಕಗಳು ಮಹತ್ವದ ಸಾಧನಗಳು. ಓದು ಮಾನವ ಸಹಜವಾದ ಹವ್ಯಾಸ, ಅದಮ್ಯ ಚೇತನದ ಪ್ರತೀಕ. ಅಜೇಯ ಬುದ್ಧಿಯ ನಿರಂತರ ಹಂಬಲವೆನ್ನಲಾಗಿದೆ. ಓದುತ್ತ ಹೋದಂತೆ ಮಾನವ ಸುಸಂಸ್ಕೃತನಾಗಿ ಸಿರಿವಂತ ಬಾಳನ್ನು ಬದುಕಲು ಸಾಧ್ಯವಾಗುತ್ತದೆ. ನಮ್ಮ ಮಾನಸಿಕ, ಬೌದ್ಧಿಕ ಶಕ್ತಿ ಸಾಮರ್ಥ್ಯಗಳು ಹೆಚ್ಚಾಗುತ್ತವೆ. ಅಷ್ಟೇ ಏಕೆ ಸತತ ಓದುವವರು ಹೊಸ ಮನುಷ್ಯರಾಗಬಲ್ಲರು. ಓದು ವುದರಿಂದ ಸಮಾಜದಲ್ಲಿ ಗೌರವ, ಘನತೆಗಳು ಹೆಚ್ಚಾಗುತ್ತವೆ. ಪುಸ್ತಕದ ಓದು ದಿನನಿತ್ಯ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಾಗ ನಮ್ಮ ಬದುಕಿಗೆ ಒಂದು ಸಮಗ್ರತೆ ಹಾಗೂ ಸಾರ್ಥಕತೆ ಪ್ರಾಪ್ತವಾಗುತ್ತದೆ. ಒಳ್ಳೆಯ, ಅತ್ಯುತ್ತಮ ಗ್ರಂಥಗಳು ಒಬ್ಬ ಸನ್ಮಿತ್ರನಂತೆ. ಹಿತೈಷಿಯಂತೆ ಮಾರ್ಗದರ್ಶನ ಮಾಡ ಬಲ್ಲವು. ನಮ್ಮ ಜೀವನದಲ್ಲಿ ಎದುರಾಗುವ ಚಿಂತೆ, ದುಗುಡ, ದುಃಖ ದುಮ್ಮಾನ, ನಿರಾಶೆ, ಕಳವಳ, ಏಕಾಂಗಿತನವನ್ನು ದೂರಮಾಡಬಲ್ಲವು. ಆದುದರಿಂದ ಓದುವ ಹವ್ಯಾಸ ಅಥವಾ ಒಳ್ಳೆಯ ಚಟವನ್ನಾಗಿ ರೂಢಿಸಿಕೊಳ್ಳುವುದು ಒಳ್ಳೆಯ ಮಾರ್ಗ ಓದುವುದರಿಂದ ವ್ಯಕ್ತಿತ್ವ ವಿಕಸನವು ಪೂರ್ಣಗೊಳ್ಳುವುದು.

***ಪುಸ್ತಕಗಳು ಜಗತ್ತನ್ನೇ ಆಳಬಲ್ಲವು :***

ವ್ಯಕ್ತಿತ್ವ ವಿಕಸನಕ್ಕೆ ಓದು, ಸತತ ಅಧ್ಯಯನ ಮುಖ್ಯ. ಜೀವನವನ್ನು ಓದಿನಿಂದ ಕಳೆಯಬೇಕು. ಓದಿನಿಂದಲೇ ಲೌಕಿಕ– ಅಲೌಕಿಕದ ಅನುಭವವು ವೃದ್ಧಿಸಿ, ಜೀವನವೂ ಅಭಿವೃದ್ಧಿಯಾಗುತ್ತದೆ. ಓದಿಗೆ ನಿವೃತ್ತಿಯೆಂಬುದಿಲ್ಲ. ಆದರೆ ಯಾವುದೇ ವೃತ್ತಿಯಿಂದ ನಿವೃತ್ತಿಯಾಗಬಹುದು. ಓದುವುದನ್ನು ಬಿಟ್ಟಿದ್ದರಿಂದಲೇ ಸಮಾಜವಿಂದು ಕೆಡಲಿಕ್ಕೆ ಕಾರಣ. ಓದಿನಿಂದಲೇ ವ್ಯಕ್ತಿತ್ವ ವಿಕಸನ ವಾಗುತ್ತದೆ ವಿನಾ ಲಕ್ಷ–ಕೋಟಿಗಟ್ಟಳೆ ಹಣವಿದ್ದೇನು ಪ್ರಯೋಜನ? ಇಂದು ಪತ್ರಿಕೆಯನ್ನೂ ಸಹ ಓದಿದವರಿಲ್ಲದುದು ವಿಷಾದದ ಸಂಗತಿ. ನಾವಿಂದು ಕ್ರೀಡಾಂಗಣ–ಗ್ರಂಥಾಲಯ ಗಳನ್ನು ಕಟ್ಟಿಸಲಾರದೇ ಅನೇಕ ಗುಡಿ–ಗುಂಡಾರಗಳನ್ನು ನಿರ್ಮಿಸುತ್ತೇವೆ. ಗ್ರಂಥಾಲಯುಗಳು ಹಳ್ಳಿ–ಹಳ್ಳಿಗೆ ಬೆಳೆಯಬೇಕು. ಎಲ್ಲರೂ ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಬಲ್ಲರು. ಓದಿ ನಿಂದಲೇ ನಿಜವಾಗಿಯೂ ಪರಿಪೂರ್ಣ ಮನುಷ್ಯರಾಗಲಿಕ್ಕೆ ಸಾಧ್ಯವಿದೆ. ಪುಸ್ತಕದ ಓದು ಮತ್ತು ಓದಬೇಕಾದ ಪುಸ್ತಕದ ಆಯ್ಕೆಯೂ ಮುಖ್ಯವಾಗುತ್ತದೆ. ಓದು ಬರೀ ಕಣ್ಣು ಹಾಯಿಸುವುದಲ್ಲ; ನೋಡೋದು ಬೇರೆ–ಓದೋದು ಬೇರೆ. ಮನಸ್ಸುಗೊಟ್ಟು ಅಂತಃಕರಣದಿಂದ ಓದುವುದು. ಕನ್ನಡಿಯ ಮುಂದೆ ಕುರುಡ ನಿಂತೇನು ಪ್ರಯೋಜನ? ಹಾಗೇ ಅವಿವೇಕಿಯ ಕೈಯಲ್ಲಿ ಪುಸ್ತಕ ಕೊಟ್ಟೇನು ಪ್ರಯೋಜನ? ಮಂಗನ ಕೈಯಲ್ಲಿ ಮಾಣಿಕ್ಯವಿದ್ದರೇನು ಪ್ರಯೋಜನ? ಎಂಬಂತಾಗಬಾರದು. ಓದು ಭೂಷಣ.

ಒಂದು ನೂರು ಪುಟ ಓದಿದಾಗ ಒಂದು ಪುಟ ಬರೆಯಬಲ್ಲಿರಿ. ಅಂಬೇಡ್ಕರರು ಓದಿನ ಗುಂಗು ಹಿಡಿಸಿಕೊಂಡ ಮೊದಲ ಭಾರತೀಯ ಎನ್ನಬಹುದು. ಬುದ್ಧಿವಂತ ಓದುಗರು ಎದುರಿಗೆ ಭೆಟ್ಟಿ ಕೊಟ್ಟರೆ 'ನಿಮ್ಮ ಮೆದುಳು ಕೊಡಿ ನಮಗೆ' ಎಂದು ಪಾಟೀಲ ಪುಟ್ಟಪ್ಪನವರು ಈಗಲೂ ಹೇಳುತ್ತಿರುತ್ತಾರೆ. ಬೆಳಿಗ್ಗೆ ಎದ್ದ ತಕ್ಷಣವೇ ಕನ್ನಡಿ ಬೇಕಾಗಿಲ್ಲ. ಲ್ಯಾಪ್‌ಟಾಪ್ ಬೇಕಾಗಿಲ್ಲ–ಪೇಪರ್ ಬೇಕು. ಪುಸ್ತಕ ಬೇಕು ಎನ್ನುವವರಿಂದು ಸಿಗುವುದೇ ವಿರಳವೆನ್ನಿ! ಪುಸ್ತಕ ಓದಿನಿಂದ ಸಂತಸ–ಆನಂದ ಪ್ರಾಪ್ತಿ! ಇಂದಿನ ಯುವಕರು ಕ್ರಿಕೆಟ್ ಪ್ರೇಮಿಗಳಾಗಿದ್ದಾರೆ. ಓದುವ ಹವ್ಯಾಸ ತ್ಯಜಿಸಿದ್ದಾರೆ. ಓದುವ ಚಟ ರೂಢಿಸಿಕೊಳ್ಳಬೇಕು. ಐಪಿಎಲ್ ಕ್ರಿಕೆಟ್ ಮೋಸದ ಆಟವದು. ಸುಸಂಸ್ಕೃತ ಪ್ರಜೆಯಾಗಬೇಕಾದರೆ ಓದು ಮುಖ್ಯ! ಪುಸ್ತಕ ಓದು ಮಡಿಯಿಂದ ಲೋದುವುವು ಇವೆ. ಓದಿದ ಮೇಲೆ ಕೈ ತೊಳೆದುಕೊಳ್ಳುವವೂ ಇವೆ. ಅವುಗಳಲ್ಲಿ ಸನ್ಮಾರ್ಗಕ್ಕೊಯ್ಯುವ ಉತ್ತಮ ಪುಸ್ತಕಗಳ ಓದಿನ ಆಯ್ಕೆ ಮುಖ್ಯ.

ಸಂಸಾರವೆಂಬ ವಿಷವೃಕ್ಷದಲ್ಲಿ ಎರಡೇ ಎರಡು ಹಣ್ಣುಗಳಿವೆ. ಒಂದು ಸಜ್ಜನರೊಂದಿಗೆ ಸಹವಾಸ ಮಾಡುವ ಹಣ್ಣು; ಉತ್ತಮ ಗ್ರಂಥ ಓದುವ ಸಹವಾಸ ಈ ಎರಡೂ ಫಲಗಳಿಂದ ಸಂತಸವೇ ಪ್ರಾಪ್ತಿ. ಭೋರ್ಗರೆಯುವಂತಹ ಸಮುದ್ರದ ತಟದಲ್ಲಿ ನಿಂತರೂ ಸಣ್ಣವನೆನಿಸಿಲ್ಲ, ಅದು ನನಗಿಂತ ಸಣ್ಣದೆನಿಸಿತು ಎಂಬಂತೆ– ಗ್ರಂಥಾಲಯದ ಬಾಗಿಲು ಎದುರಿಗೆ ಬಂದು ನಿಂತರೆ ನಾನು ಅತೀ ಸಣ್ಣವನಾದೆ! ಗ್ರಂಥಗಳನ್ನು ಓದುವವನಿಗೆ ಈ ಎರಡೂ ಅನುಭವಗಳೂ ಸರಿಸಮವೆನಿಸಿದವು. ಒಂದು ದಿನಕ್ಕೆ ಹತ್ತು ಪುಟಗಳನ್ನು ಓದಿದರೂ ಒಂದು ತಿಂಗಳಿಗೆ ಒಂದು ಪುಸ್ತಕ ಮುಗಿಯುತ್ತದೆ. ಓದು ಎಂದರೆ ಕೇವಲ ಪುಟ ತಿರುವಿ ಹಾಕುವುದಲ್ಲ. ಮನಃಪೂರ್ವಕ ಓದಬೇಕು. ಗಾಂಧೀ 'ಅನ್ ಟು ದಿ ಲಾಸ್ಟ್' ಓದಿದರು. ಇದರಿಂದಲೇ ನಮ್ಮ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟರು. ಡಾ. ಅಂಬೇಡ್ಕರರು ಗ್ರಂಥಾಲಯದ ಸದುಪಯೋಗಮಾಡಿಕೊಂಡು ಸಂವಿಧಾನದ ಶಿಲ್ಪಿಯಾದರು. ಡಾ. ಸಿ.ವಿ. ರಾಮನ್‌ರು ಮಲಗುವುದಕ್ಕಿಂತ ಪೂರ್ವದಲ್ಲಿ ಪುಸ್ತಕವನ್ನೋದಿಯೇ ಮಲಗುತ್ತಿದ್ದರು. ಇದು ಅವರ ಓದಿನ ಚಟವಾಗಿತ್ತು. ಆದ್ದರಿಂದ ಪುಸ್ತಕಗಳು ಜಗತ್ತನ್ನೇ ಆಳುವವು. ಗ್ರಂಥಗಳ ಪಾವಿತ್ರ್ಯತೆಯ ಕುರಿತು ರಾಷ್ಟ್ರಕವಿ ಕುವೆಂಪು ಅವರ ಮಾತನ್ನು ಗಮನಿಸುವಂತಿದೆ. ಅವರೆಂದುದುದು ಹೀಗೆ– 'ಗ್ರಂಥಗಳ ಪಾವಿತ್ರ್ಯತೆ ಎಷ್ಟೆಂಬುದು ಅದರ ಜನ್ಮದೊಂದಿಗೆ ಪ್ರಾರಂಭವಾಗುವುದು. ಪಂಡಿತರು, ಕವಿಗಳು, ಸಾಹಿತಿಗಳು, ಸಂಶೋಧಕರು ಶೋಧಿಸಿದ ಅಥವಾ ತಿಳುವಳಿಕೆಗೆ ಬಂದ ವಿಷಯ ಸಂಪತ್ತನ್ನು ಏಕಾಂತದಲ್ಲಿ ಶಾರದೆಯ ಸ್ತುತಿಯೊಂದಿಗೆ ಸ್ತಬ್ಧವಾಗಿ ಕುಳಿತು ಗ್ರಂಥ ರಚಿಸಲು ಪ್ರಾರಂಭಿಸುವನು. ಅಲ್ಲಿ ಚಿಂತನಗಳನ್ನು ಕಳೆದಷ್ಟೂ ಅಮೂಲಾಗ್ರ ವಿಷಯ ಪ್ರತಿಪಾದನೆಗೊಳ್ಳುವುದು. ಇಂತಹ ಅತ್ಯುತ್ತಮ ಗ್ರಂಥದಲ್ಲಿ ಭಗವಂತನು ನೆಲೆಸಿರುವನು' ಎಂದಿದ್ದಾರೆ. ಇಂತಹ ಅತ್ಯುತ್ತಮ ಗ್ರಂಥಗಳನ್ನು ಓದುವುದರಿಂದ ಬರಹಗಾರನಿಗಿಂತ ಓದುಗನಿಗೇ ಮತ್ತಷ್ಟು ಜ್ಞಾನಾಭಿವೃದ್ಧಿ ಯಾಗುತ್ತದೆ. ಆದುದರಿಂದ ಅತ್ಯುತ್ತಮ ಗ್ರಂಥಗಳು ನಾಡಿನ ಇತಿಹಾಸವನ್ನೇ ಬದಲಿಸಬಲ್ಲವು. ಪುಸ್ತಕಗಳನ್ನು ಪ್ರೀತಿಸು ವವರಿಗೆ ಒಳ್ಳೆಯ, ಸ್ನೇಹಿತರ ಅಗತ್ಯ ಕೂಡ ಬೇಕಾಗುವುದಿಲ್ಲ ಎಂದಿದ್ದಾರೆ 'ಬರೊ' ಎಂಬ ಆಂಗ್ಲ ಲೇಖಕ. ಆದುದರಿಂದ ಉತ್ತಮ ಪುಸ್ತಕಗಳ ಲೋಕದಲ್ಲಿ ವಿಹರಿಸುವ ಪ್ರತಿಯೊಬ್ಬನ ಬದುಕೂ ಸುಂದರ. ಓದುವ

* 'ಹೊಂಬೆಳಕು', ಮನೆ ನಂ. ೩, ಓಂ ಸ್ಕೂಲ್ ಹತ್ತಿರ, ಜಲದರ್ಶಿನಿ ನಗರ, ಧಾರವಾಡ – ೫೮೦ ೦೦೩.

ಚಟ ಅಥವಾ ಗುಂಗು ಹಿಡಿಸಿಕೊಂಡವನಿಗೆ ಮೊದಲನೆಯ ಅವಶ್ಯಕತೆಯೇ ಪುಸ್ತಕ. ಆದರೆ ಓದು ವ್ಯಕ್ತಿಯ ಮನಸ್ಸನ್ನು ಅರಳಿಸುವ ವಿಶಿಷ್ಟ ಸಾಧನವಾಗಬೇಕು. ಕೇವಲ ಕಾಲಹರಣದ ಓದಾಗಬಾರದು. ಮನೆಗೆ ದೀಪ ಹೇಗೋ ಹಾಗೆ ಪುಸ್ತಕ. ಇಂದಿನ ವೈಜ್ಞಾನಿಕ ಯುಗದಲ್ಲಿ ಅಲ್ಪ ಸಮಯದಲ್ಲಿ ಮನರಂಜನೆ ನೀಡುವ ಮಾಯಾಪೆಟ್ಟಿಗೆ(ಟಿವಿ) ಸಿನಿಮಾದ ಕಡೆಗೆ ಒಲವು ಹೆಚ್ಚು. ಇವುಗಳಿಂದ ಜ್ಞಾನಾಭಿವೃದ್ಧಿಯಾಗು ವುದೂ ಅಸಂಭವ. ನಮ್ಮ ವಿಚಾರಕ್ಕೆ ಸಾಣೆ ಹಿಡಿದು ಬುದ್ಧಿ ವೃದ್ಧಿಯಾಗಿ ಹರಿತವಾಗಬೇಕಾದರೆ ಗ್ರಂಥವೇ ಶತಸಿದ್ಧ ಸಾಧನ.

ಮನೆಯನ್ನು ಅಂದವಾಗಿ ಕಟ್ಟಿಕೊಂಡು ಅದಕ್ಕೊಂದು ಷೋಕೇಸ್ ಅಲಂಕಾರಕ್ಕೆಂದು ಹೇಗೆ ಮಾಡಿಕೊಳ್ಳು ತ್ತೇವೆಯೋ ಹಾಗೆ ಬುಕ್ ಕೇಸು ಅಥವಾ ಗ್ರಂಥ ಸಂಗ್ರಹವುಳ್ಳ ಕಪಾಟನ್ನು ನಿರ್ಮಿಸಿಕೊಂಡರೆ ಷೋಕೇಸಿಗಿಂತಲೂ ಹೆಚ್ಚು ಸೊಗಸ ನ್ನುಂಟುಮಾಡುತ್ತದೆ. ಮನೆಯಲ್ಲಿ ಗ್ರಂಥಗಳು ಮನೆಯಂಗಳ ದಲ್ಲಿ ಗಿಡಗಳಿದ್ದರೆ ಪ್ರಪಂಚವೇ ಸೌಖ್ಯದಿಂದಿರಲು ಸಾಧ್ಯ. ಗ್ರಂಥ ಜೀವನಾವಶ್ಯಕ ವಸ್ತುಗಳಲ್ಲಿ ಒಂದಾಗಬೇಕು. ಪುಸ್ತಕ ಗಳಿಲ್ಲದ ಮನೆಯಾಗಲಿ, ಬದುಕಾಗಲಿ, ಸಮಾಜವಾಗಲಿ ಶೋಭಿಸಲಾರದು. ಪುಸ್ತಕಗಳನ್ನು ಪೋಷಿಸುವುದೂ ಅಷ್ಟೇ ಪವಿತ್ರ ಕರ್ತವ್ಯವೂ ಆಗಿದೆ. ನ್ಯಾಯಾಲಯದಲ್ಲಿ ನ್ಯಾಯಾಧೀಶನು ಕಕ್ಷಿದಾರನಿಗೆ ಪವಿತ್ರ ಗ್ರಂಥಮುಟ್ಟಿ ಸತ್ಯ ಹೇಳು ಎನ್ನುವನು. ಅಲ್ಲಿ ಗ್ರಂಥವು ಶ್ರೇಷ್ಠ ಸಾಧನವಾಗಿ ನಿಂತಿರುವುದು. ಅಲ್ಲಿ ಅದುವೇ ಭಗವಂತನ ರೂಪ. ಜಗತ್ತಿನಲ್ಲಿ ೨೧೦ ಕೋಟಿ ಜನ ಕ್ರಿಶ್ಚಿಯನ್‌ರಿದ್ದಾರೆ. ಅವರು ಪ್ರತಿ ವಾರವೂ 'ಬೈಬಲ್' ಪಠಣ ಮಾಡುತ್ತಾರೆ. ೧೭೦ ಕೋಟಿ ಇರುವ ಮುಸ್ಲಿಂರು 'ಕುರಾನ್' ಓದುತ್ತಾರೆ. ಅದೇ ರೀತಿಯಾಗಿ ಹಿಂದುಗಳು, ಸಿಖ್ಖರು ಹಾಗೂ ಇತರೇತರ ಧರ್ಮಿಯರು ತಂತಮ್ಮ ಧರ್ಮಗ್ರಂಥಗಳ ಅಧ್ಯಯನ ಮಾಡುತ್ತಾರೆ. ಹಾಗಾಗಿ ಪುಸ್ತಕಗಳು ಅಮರಜೀವಿಗಳು. ಒಳ್ಳೆಯವರ ಸಂಗ ಹಾಗೂ ಉತ್ತಮ ಪುಸ್ತಕಗಳ ಓದಿನಿಂದ ಬದುಕು ಹಸನಾಗುತ್ತದೆ ಮತ್ತು ಅನನ್ಯವಾಗುತ್ತದೆ. ಓದುವುದಾದರೆ ಉತ್ತಮ ಪುಸ್ತಕಗಳನ್ನು ಆಯ್ದುಕೊಂಡು ಓದಿದರೆ ಬದುಕೂ ವಿಕಸನ ವಾಗುತ್ತದೆ. ಅದುದರಿಂದ ವ್ಯಕ್ತಿತ್ವ ವಿಕಸನಕ್ಕೆ ಓದು ಮುಖ್ಯ ವಾಗುತ್ತದೆ.

ಒಟ್ಟು, ಸಮಗ್ರ ಗ್ರಂಥಗಳ ರಾಶಿಯನ್ನು ಎರಡು ಭಾಗ ಮಾಡಿದರೆ ಒಂದು ಗುಂಪು ಒಳ್ಳೆಯ ಪುಸ್ತಕಗಳಾದರೆ; ಮತ್ತೊಂದು ಗುಂಪು ಕೆಟ್ಟ ಮಾರ್ಗ ಇಲ್ಲವೆ ದುರ್ಮಾರ್ಗ ಕ್ಕೊಯ್ಯುವ ಪುಸ್ತಕಗಳೆಂಬುದಾಗಿ ವಿಂಗಡಿಸಬಹುದಾಗಿದೆ. ಸ್ನಾನ ಮಾಡಿ ಮಡಿ ಉಡುಗೆಯಿಂದ ಓದುವ ಪುಸ್ತಕಗಳು ಸನ್ಮಾರ್ಗದೆಡೆಗೊಯ್ಯುವಂತಹ ಪವಿತ್ರ ಗ್ರಂಥಗಳು ಒಂದು ಕಡೆಯಾದರೆ ಕೆಲವು ಕಥೆ–ಕಾದಂಬರಿ, ಪತ್ತೇದಾರಿ ಕಾದಂಬರಿ ಯಂತಹ ಪುಸ್ತಕಗಳು ಅಡ್ಡದಾರಿಯನ್ನು ತೋರಿಸುವವೂ ಇರುತ್ತವೆ. ಇಂತಹವುಗಳನ್ನು ಓದಿದ ಮೇಲೆ ಸ್ನಾನ ಮಾಡಿ ಮೈ–ಮನ ಮಡಿ ಮಾಡಿಕೊಳ್ಳಬೇಕಾಗುತ್ತದೆ. ಅಂದರೆ ಮಡಿಯಿಂದ, ಓದುವ ಪುಸ್ತಕಗಳು ; ಓದಿದ ಮೇಲೆ ಮಡಿ ಮಾಡಿಕೊಳ್ಳುವ ಪುಸ್ತಕಗಳು ಎಂದು ಪುಸ್ತಕಗಳನ್ನು ವಿಂಗಡಿಸಿ ಬಹುದಾಗಿದೆ. ಹಿಂದೆಂದಿಗಿಂತಲೂ ಇಂದು ಕಂಪ್ಯೂಟರ್ ಯುಗವಾದರೂ ಗ್ರಂಥ ಮತ್ತು ಗ್ರಂಥಾಲಯಗಳ ಪಾತ್ರ ಪ್ರಮುಖವಾದುದು. ಪ್ರತಿಯೊಂದು ಶಾಲೆ ಕಾಲೇಜು ವಿಶ್ವವಿದ್ಯಾನಿಲಯಗಳಿಗೆ ಅಚ್ಚುಕಟ್ಟಾದ ಗ್ರಂಥಾಲಯವಿರಲೇ ಬೇಕು. ಓದುಗರೇ ಭಕ್ತರು, ಗ್ರಂಥಗಳೇ ದೇವರು. ಗ್ರಂಥಾಲಯವೇ ದೇವಮಂದಿರ ಅಥವಾ ಮುಕ್ತಿಯ ಮಂದಿರವಾದರೆ, ಅಲ್ಲಿರುವ ಗ್ರಂಥಪಾಲಕರೇ ಪೂಜಾರಿಗಳು. ಈ ಭಾವನೆ ಮೂಡಿಸಿಕೊಂಡು ಓದಿಗೆ ತೊಡಗಿಸಿಕೊಂಡವ ನಿಗೆ ಸರಸ್ವತಿದೇವಿಯ ದರ್ಶನವಾಗುತ್ತದೆ.

– ಮುಂದುವರಿಯುತ್ತದೆ

**ಶ್ರೀವಾಣಿ**

ಸರ್ಕಾರದ ವಾಹನಗಳು, ಸರ್ಕಾರದ ಇಂಧನ ಯಥೇಚ್ಛವಾಗಿ ಖರ್ಚಾಗುತ್ತಿದೆ. ಇಂದು ಅಧಿಕಾರಿಗಳು, ರಾಜಕಾರಣಿಗಳು ತಮ್ಮ ಸ್ವಂತ ಕೆಲಸಕ್ಕೂ ಸರ್ಕಾರದ ವಾಹನ ಉಪಯೋಗಿಸುತ್ತಿರುವುದು ದುರದೃಷ್ಟಕರ. ಹಿಂದೆ ಎಂಥ ಪ್ರಾಮಾಣಿಕತೆ ಇತ್ತು, ಎಂಥ ಕರ್ತವ್ಯ ಪ್ರಜ್ಞೆ ಇತ್ತು; ಎಂಥ ರಾಷ್ಟ್ರಪ್ರೇಮ ಇತ್ತು ಎಂಬ ವಿಚಾರ ವನ್ನು ಪ್ರತಿಯೊಬ್ಬರೂ ಅರ್ಥಮಾಡಿಕೊಳ್ಳಬೇಕು. ಇದೆಲ್ಲವನ್ನು ಚಾಣಕ್ಯನನ್ನು ನೋಡಿ ಕಲಿಯಬೇಕು. ಅವನು ಇಡೀ ರಾಷ್ಟ್ರಕ್ಕೆ ಮಾದರಿಯಾಗಿದ್ದನು. ಅವನು ಒಂದು ಸಾಧಾರಣ ಮನೆಯಲ್ಲಿ ವಾಸಮಾಡುತ್ತಿದ್ದ. ಚಾಪೆ ಬಿಟ್ಟರೆ ಮತ್ತೊಂದಿರಲಿಲ್ಲ. ಅವನು ಎಷ್ಟರ ಮಟ್ಟಿಗೆ ಆಳ್ವಿಕೆ ಮಾಡುತ್ತಾ ಇದ್ದ; ಎಷ್ಟು ವಿಚಾರವಂತನಾಗಿದ್ದ, ಪ್ರಾಮಾಣಿಕನಾಗಿದ್ದ, ಎಷ್ಟು ಸರಳ ಜೀವನ ನಡೆಸುತ್ತಿದ್ದ ಎಂಬುದನ್ನು ತಿಳಿದು ನಡೆಯಬೇಕು.





# ಕರ್ನಾಟಕದಲ್ಲಿ ಲೋಕಮಾನ್ಯ ತಿಲಕರು

– ಶಕುಂತಲಾ ಯು. *

'ಸ್ವರಾಜ್ಯವೇ ನನ್ನ ಜನ್ಮಸಿದ್ಧ ಹಕ್ಕು. ಅದನ್ನು ನಾನು ಪಡೆದೇ ತೀರುತ್ತೇನೆ' ಇದು ಬರೀ ಮಾತಲ್ಲ ಇದು ಸ್ವಾತಂತ್ರ್ಯ ಕೇಸರಿಯ ಸಿಂಹಘರ್ಜನೆ. ತಿಲಕರು ಹೀಗೆ ಗುಡುಗಿದ್ದು ನ್ಯಾಯಾಲದಲ್ಲಿ. ಆಗ ನ್ಯಾಯಾಲಯ ಸ್ತಂಭೀ ಭೂತವಾಯಿತು. ನ್ಯಾಯಾಧೀಶರ ಎದೆ ಢವಢವ ಎಂದಿತು. ನ್ಯಾಯಾಲಯದ ಜನರೆಲ್ಲ ರೆಪ್ಪೆ ಮಿಟುಕಿಸದೇ ತಿಲಕರನ್ನು ನೋಡುತ್ತಿದ್ದರು. ಸಂದರ್ಭ ಈ ರೀತಿ ಇದೆ. ೧೮೯೬ರಲ್ಲಿ ಮುಂಬೈ ಮತ್ತು ಪುಣೆ ನಗರಗಳು ಭೀಕರ ಪ್ಲೇಗ್‌ರೋಗಕ್ಕೆ ಬಲಿಯಾಗಿ, ಮರುವರ್ಷ ಪರಿಸ್ಥಿತಿ ಉಲ್ಬಣಿಸಿದಾಗ ಆಗ ಪುಣೆಯ ಕಲೆಕ್ಟರ್ ರ್‍ಯಾಂಡ್ ತೆಗೆದುಕೊಂಡ ಕ್ರಮಗಳು ನಿರುಪಯೋಗಿ ಆಗಿದ್ದರಿಂದ ತಿಲಕರು 'ಕೇಸರಿ' ಪತ್ರಿಕೆಯಲ್ಲಿ ಅಧಿಕಾರಿಯ ವಿರುದ್ಧ ಲೇಖನಗಳನ್ನು ಬರೆದರು. ಲೇಖನ ಗಳಲ್ಲಿದ್ದ ಸತ್ಯಾಂಶಗಳು ಜನರ ಗಮನ ಸೆಳೆದವು. ಜನರು ಪ್ರತಿಭಟಿಸಿದರು. ಚಾಪೇಕರ ಸಹೋದರರು ಮತ್ತು ಅವರ ಸ್ನೇಹಿತರು ಸೇರಿ ರ್‍ಯಾಂಡ್‌ನನ್ನು ಗುಂಡಿಕ್ಕಿ ಕೊಂದರು. ಈ ಘಟನೆಯನ್ನು ಸರಕಾರ ತೀವ್ರವಾಗಿ ಪರಿಗಣಿಸಿ, ಉದ್ರೇಕಕಾರಿ ಲೇಖನಗಳನ್ನು ಬರೆದು ಪ್ರಚೋದನೆ ಮಾಡಿದ ಆಪಾದನೆ ಮೇರೆಗೆ ವಿಚಾರಣೆ ನಡೆಸಿದಾಗ ನ್ಯಾಯಾಲಯದಲ್ಲಿ ಈ ರೀತಿ ಗುಡುಗಿದರು. ತಿಲಕರಿಗೆ ೧೮ ತಿಂಗಳ ಜೈಲು ಶಿಕ್ಷೆಯಾಯಿತು.

ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ತಿಲಕರು ತಂದೆ–ತಾತನಿಂದ ಸಾಂಪ್ರದಾಯಿಕ ವಿದ್ಯೆಗಳ ಜೊತೆ ಜ್ಯೋತಿಷ್ಯ, ಖಗೋಲ, ಭೂಗೋಲ, ಇತಿಹಾಸ ಅಭ್ಯಸಿಸಿದರು. ಬಿ.ಎಲ್. ಎಲ್.ಎಲ್.ಬಿ. ಪದವೀಧರರು. ಬಹು ದೊಡ್ಡ ವಿದ್ವಾಂಸರಾಗಿದ್ದರು. ಅವರಲ್ಲೊಬ್ಬ ಪತ್ರಕರ್ತನೂ ಇದ್ದ. ತಿಲಕರು ಮರಾಠಿ ಭಾಷೆಯಲ್ಲಿ 'ಕೇಸರಿ' ಮತ್ತು ಆಂಗ್ಲ ಭಾಷೆಯಲ್ಲಿ 'ಮರಾಠಾ' ಎಂಬ ಪತ್ರಿಕೆಗಳನ್ನು ಸಂಪಾದಿಸಿ, ಪ್ರಕಾಶನಗೊಳಿಸುವ ಜೊತೆಯಲ್ಲಿ ಉದ್ಬೋಧಕ ಅಂಕಣಗಳನ್ನು ಬರೆಯುತ್ತಿದ್ದರು. ತಿಲಕರ ಕೇಸರಿ ಪತ್ರಿಕೆ, ಬ್ರಿಟಿಷರ ವಿರುದ್ಧ ಕಿಡಿ ಕಾರುತ್ತಿತ್ತು. ಇದರ ಪ್ರಸಾರ ಬೆಳಗಾವಿ, ಧಾರವಾಡ ಮತ್ತು ವಿಜಾಪುರ ಜಿಲ್ಲೆಗಳಲ್ಲಿ ಇದ್ದಿತು. ಮರಾಠಿ ಬಾರದವರು ಮರಾಠಿ ಕಲಿತು ಓದುತ್ತಿದ್ದರು. ಅಂಕೋಲಾ ತಾಲ್ಲೂಕಿನಲ್ಲಿ 'ಮಹಾದೇವನ ಕಟ್ಟೆ' ಎಂಬ ವಿಳಾಸಕ್ಕೆ ಪತ್ರಿಕೆ ಬರುತ್ತಿತ್ತಂತೆ. ಅಲ್ಲಿ ಮರಾಠಿ ಬಂದ ವ್ಯಕ್ತಿ ಅದನ್ನು ಓದಿ ಹೇಳುತ್ತಿದ್ದನಂತೆ. ಸಿದ್ಧಾಪುರ, ಚಿತ್ರದುರ್ಗ, ಶಿವಮೊಗ್ಗ, ಬಳ್ಳಾರಿಗಳಲ್ಲಿ ಕೇಸರಿ ಚಂದಾದಾರ ರಿದ್ದರು. ಮುಂಬೈ ಕರ್ನಾಟಕದಲ್ಲಿ 'ಕೇಸರಿ' ಜನಪ್ರಿಯ ವಾಗಿತ್ತು. ಅಲ್ಲಿಯ ಕನ್ನಡ ಪತ್ರಿಕೆಗಳು ಕೇಸರಿಯ ವಿಚಾರ ಗಳನ್ನು ಕನ್ನಡದಲ್ಲಿ ಪ್ರಕಟಿಸುತ್ತಿದ್ದವು. ಹುಬ್ಬಳ್ಳಿಯಲ್ಲಿ 'ಕನ್ನಡ ಕೇಸರಿ' ಡಾ. ಹರ್ಡಿಕರರ ಉಪಸಂಪಾದಕತ್ವದಲ್ಲಿ ಹೊರಡುತ್ತಿತ್ತು. ಮೈಸೂರಿನ ಎಂ. ಸೀತಾರಾಮಶಾಸ್ತ್ರಿಗಳು ಆರಂಭಿಸಿದ ಪತ್ರಿಕೆ 'ವೀರಕೇಸರಿ'ಗೆ ಕೇಸರಿ ಪತ್ರಿಕೆ ಸ್ಫೂರ್ತಿ.

***ಕರ್ನಾಟಕದಲ್ಲಿ ತಿಲಕರು :***

೧೯೦೪ರಲ್ಲಿ ಧಾರವಾಡದಲ್ಲಿ ಮುಂಬೈ ರಾಷ್ಟ್ರ ರಾಜಕೀಯ ಸಮ್ಮೇಳನ ನಡೆದಾಗ ತಿಲಕರು ಬಂದಿದ್ದರು. ೧೯೦೬ರಲ್ಲಿ ಸಾರ್ವಜನಿಕ ಗಣೇಶೋತ್ಸವ ಬೆಳಗಾವಿಯಲ್ಲಿ ನಡೆದಾಗ ಭಾಷಣಕಾರರಾಗಿ ತಿಲಕರು ಆಗಮಿಸಿದ್ದರು. ೧೯೦೬ರಲ್ಲಿ ಬೈಲಹೊಂಗಲ ಹೊಸೂರು ಮುರುಗೋಡು ಆನಿಗೋಳಕ್ಕೆ ಬಂದು ಭಾಷಣ ಮಾಡಿದ್ದರು. ತಿಳಕರ ಮರಾಠಿ ಭಾಷೆಗಳನ್ನು ಮುದವೀಡು ಕೃಷ್ಣರಾವ್ ಕನ್ನಡಕ್ಕೆ ಭಾಷಾಂತರಿಸಿದರು.

೧೯೦೫ರಲ್ಲಿ ತಿಲಕರು ಬಳ್ಳಾರಿಯ ನಾಟಕ ಭವನದಲ್ಲಿ ಭಾಷಣ ಮಾಡಿ ವಿಜಯನಗರದ ಇತಿಹಾಸ ದಿಂದ ಸ್ಫೂರ್ತಿ ಹೊಂದಿ ನಾವೆಲ್ಲ ಬ್ರಿಟಿಷರ ವಿರುದ್ಧ ಹೋರಾಡಬೇಕೆಂದು ಕರೆಯಿತ್ತರು.

೧೯೦೬ರಲ್ಲಿ ಬೆಳಗಾವಿಗೆ ತಿಲಕರು ಭೇಟಿ ಕೊಟ್ಟಾಗ ಗಂಗಾಧರರಾಯ ದೇಶಪಾಂಡೆ ಅವರಿಗೆ ಕನ್ನಡದಲ್ಲಿ ಭಾಷಣ ಮಾಡಲು ತಿಲಕರು ಹೇಳಿದರಂತೆ. ಏಕೆಂದರೆ ಆಗ ಮರಾಠಿಯಲ್ಲಿ ಮಾತನಾಡುವುದೇ ಹೆಮ್ಮೆಯ ವಿಷಯವಾಗಿತ್ತು.

೧೯೦೭ರಲ್ಲಿ ತೀವ್ರಗಾಮಿ ತಿಲಕರ ಭಾಷಣವನ್ನು ಮಂದಗಾಮಿಗಳು ಸೂರತ್ ಸಭೆಕಾಲಕ್ಕೆ ಪ್ರತಿಭಟಿಸಿದಾಗ ಕರ್ನಾಟಕದ ಗಂಗಾಧರ ದೇಶಪಾಂಡೆ, ಕೌಜಲಗಿ

* ಪಿ.ಟಿ.ಸಿ. ಕ್ಯಾಂಪ್, ನಾಗೇನಹಳ್ಳಿ, ಗುಲಬರ್ಗಾ–೫೮೫ ೧೦೨.

ಶ್ರೀನಿವಾಸರಾವ್ ತಿಲಕರ ರಕ್ಷಣೆಗೆ ಹೋಗಿದ್ದರು. ಕೌಜಲಗಿ ಒಂದು ಹಲ್ಲು ಸಹ ಹೋರಾಟದಲ್ಲಿ ಕಳೆದುಕೊಂಡರಂತೆ.

೧೯೧೬ರಲ್ಲಿ ತಿಲಕರು ಹೋಂ ರೂಲ್‌ಲಿಂಗ್ ಆರಂಭಿಸಿದಾಗ ಬೆಳಗಾವಿ ಸಂಕೇಶ್ವರ ನಿಪ್ಪಾಣಿ ಅಥಣಿಗೆ ಬಂದು ಲೀಗ್‌ನ ಶಾಖೆ ಆರಂಭಿಸಿದರು. ಅಥಣಿ ಗಚ್ಚಿನ ಮಠದಲ್ಲಿ ಶ್ರೀ ಶಿವಯೋಗಿಗಳ ಎದುರು ತಿಲಕರು ಭಾಷಣ ಮಾಡಿದ್ದನ್ನು ಶ್ರೀ ಬೂದಿಹಾಳಮಠ ಬಸವಾರ್ಯರು ಕನ್ನಡಕ್ಕೆ ಅನುವಾದ ಮಾಡಿ ಹೇಳಿದರು. ಶಿವಯೋಗಿಗಳು ನೀಡಿದ ಬಂಗಾರದ ಪದಕವನ್ನು ತಿಲಕರು ಸ್ವಾತಂತ್ರ್ಯ ಹೋರಾಟದ ನಿಧಿಗೆ ಅರ್ಪಿಸಿದರು. ಬೆಳಗಾವಿ ವಕೀಲ ದತ್ತೋಪಂತ ದಳವಿ ಲೀಗ್‌ನ ರಾಜ್ಯದ ಅಧ್ಯಕ್ಷರಾದರು. ಹುಬ್ಬಳಿಯ್ಯಲ್ಲಿ ಡಾ॥ ಸೊನಟಕ್ಕೆಲೀಗ್‌ನ ಶಾಖೆಯ ನೇತಾರರಾದರು. ೧೯೧೭ಫೆಬ್ರವರಿ ೧೮ರಂದು ತಿಲಕರು ಲೀಗ್‌ನ ಪ್ರಚಾರಕ್ಕೆ ಧಾರವಾಡ, ಹುಬ್ಬಳ್ಳಿ, ಗದಗಗಳಲ್ಲಿ ಪ್ರವಾಸ ಮಾಡಿದರು. ಧಾರವಾಡ ಮಾಳಮಡ್ಡಿಯಲ್ಲಿರುವ ಬಳ್ಳಾರಿ ವಕೀಲರ ಮನೆಯಲ್ಲಿ ಭಾಷಣ ಮಾಡಿದರು. ಗದಗಿನ ಹುಚ್ಚಯ್ಯ ಹೊನ್ನಾಪುರಮಠ, ಆಲೂರ ವೆಂಕಟ ರಾಯರು, ಕಡಪಾ ರಾಘವೇಂದ್ರರಾವ್ ಸದಸ್ಯರಾದರು. ತಿಳಕರು ಧಾರವಾಡಕ್ಕೆ ಬಂದಾಗ ಊರಲ್ಲಿ ಕುದುರೆ ಸಾರೋಟಿನಲ್ಲಿ ಮೆರವಣಿಗೆ ಮಾಡಿದರಂತೆ. ಸಾರೋಟನ್ನು ವಿದ್ಯಾರ್ಥಿಗಳು ಸಹ ಎಳೆದರಂತೆ. ಗದಗಿನಲ್ಲಿ ಜಾಲಿಹಾಳ ವಕೀಲರು, ಹುಯಿಲಗೋಳ ಡಾಕ್ಟರರು ನಾಯಕರಾದರು. ತಿಲಕರ ಭಾಷಣವನ್ನು ಆಲೂರ ವೆಂಕಟರಾಯರು ಅನುವಾದಿಸಿದರು.

ಬ್ರಿಟಿಷ್ ಸರಕಾರವು ತಿಲಕರಿಗೆ 'ಅಶಾಂತಿಯ ಜನಕ' (Father of unrest) ಭಾರತೀಯ ಕ್ರಾಂತಿಯ ಜನಕ (Father of Indian revolution) ಎಂದು ಕರೆದರು. ಭಾರತದ ಜನತೆ ತಿಲಕರನ್ನು ಅಭಿಮಾನದಿಂದ 'ಕೇಸರಿ' 'ಸ್ವಾತಂತ್ರ್ಯ ಕೇಸರಿ', 'ಲೋಕಮಾನ್ಯ'ವೆಂದರೆ ಕೆಲ ನಿಕಟ ವರ್ತಿಗಳು ಅವರನ್ನು ಹುಸಿಗೋಪದಿಂದ ಮಿ. ಬ್ಲಂಟ್ Mr. Blunt ಎಂದು ಕರೆದರು.

ತಿಳಕರಿಗೆ ಮರಾಠಿ ಮಾತೃಭಾಷೆ ಹಿಂದೀ, ಆಂಗ್ಲ ಭಾಷೆಗಳು ಆಪ್ತ ಭಾಷೆ 'ಸಂಸ್ಕೃತ' ಭಾಷೆ ಕರತಲಾಮಲಕ. ವೇದಗಳನ್ನು ಅಭ್ಯಾಸ ಮಾಡಿ ೧೯೦೩ರಲ್ಲಿ 'The Arctic Home of Vedas' ಗ್ರಂಥ ರಚಿಸಿದರು. ೧೯೦೮ ರಿಂದ ೧೯೧೪ರವರೆಗೆ ಮಂಡಾಲೆ ಜೈಲಿನಲ್ಲಿದ್ದಾಗ 'ಗೀತಾರಹಸ್ಯ' ಉದ್ಗ್ರಂಥವನ್ನು ಮರಾಠಿಯಲ್ಲಿ ಬರೆದರು. ಈ ಕೃತಿ ಆಲೂರ ವೆಂಕಟರಾಯರಿಂದ ಕನ್ನಡದಲ್ಲಿ ಭಾಷಾಂತರವಾಯಿತು.

ತಿಲಕರ ಹಿರಿಯ ಮಗ ಅನಾರೋಗ್ಯದಿಂದ ಕೊನೆಯ ಕ್ಷಣ ಸಮೀಪಿಸಿದಾಗ, ತಮ್ಮ ಕಾರ್ಯಾಲಯ ದಲ್ಲಿ ಮಹತ್ವದ ಚರ್ಚೆಯಲ್ಲಿ ಮಗ್ನರಾಗಿದ್ದರು. ಸೇವಕ ವಿಷಯ ತಿಳಿಸಿದರೂ ನಿರ್ಲಿಪ್ತರಾಗಿದ್ದರು. ಚರ್ಚೆ ಮುಗಿಸಿ ಮನೆಗೆ ಬಂದಾಗ ಮಗ ತೀರಿದ್ದಾನೆ. ಯಾವ ಭಾವೋ ದ್ವೇಗಕ್ಕೆ ಒಳಗಾಗದೇ ಮಗನ ಅಂತ್ಯಯಾತ್ರೆಯಲ್ಲಿ ಭಾಗ ವಹಿಸಿದರು. ಇದು ಅವರ ಸ್ಥಿತಪ್ರಜ್ಞತೆ. ಒಂದು ಸಲ ಅತಿ ಸುಂದರ ಹೆಣ್ಣುಮಗಳು ಕಾನೂನು ಸಲಹೆಗೆ ತಿಲಕರ ಬಳಿ ಬಂದು ಒಂದೂವರೆ ಗಂಟೆ ಎದುರು ನಿಂತಿದ್ದರೂ ಒಂದು ಬಾರಿ ಕೂಡ ಕತ್ತೆತ್ತಿ ಅವಳ ಮುಖ ನೋಡಲಿಲ್ಲ! ಎಂಥ ಸಂಯಮ.

ಗಣಪತಿ ಹಬ್ಬ ಮತ್ತು ಶಿವಾಜಿ ಜಯಂತಿಗಳನ್ನು ರಾಷ್ಟ್ರೀಯ ಹಬ್ಬವನ್ನಾಗಿ ಪರಿವರ್ತಿಸಿದರು. ತಿಲಕರು ಛತ್ರಪತಿ ಶಿವಾಜಿ ನಡೆದ ದಾರಿಯಲ್ಲಿ ಸಾಗಿ ಭಾರತೀಯ ಸ್ವಾತಂತ್ರ್ಯದ ಅಡಿಗಲ್ಲನ್ನಿಟ್ಟಿತು. ಭಾರತೀಯ ಕ್ರಾಂತಿಯ ಜನಕ ಎನ್ನಬಹುದು.

ಆಗಸ್ಟ್ ತಿಂಗಳು ಸ್ವಾತಂತ್ರ್ಯದ ತಿಂಗಳು ಆಗಸ್ಟ್ ೧ ಲೋಕಮಾನ್ಯರು ಗತಿಸಿದ ದಿನ. 'ಚಲೇಜಾವ್' ಚಳುವಳಿ ದಿನ ಆಗಸ್ಟ್ ೧೫ ಸ್ವಾತಂತ್ರ್ಯ ದಿನ.

ಪುಣೆ ನಗರದಲ್ಲಿ ತಿಲಕರ ಮನೆ ಆಧುನೀಕರಣವಾಗಿ ೪ ಮಹಡಿ ಕಟ್ಟಡವಾಗಿದೆ. ಅಲ್ಲಿ ವಸ್ತು ಸಂಗ್ರಹಾಲಯ, ಗ್ರಂಥಾಲಯ, ತಿಳಕರ ಪುಸ್ತಕ, ಬಟ್ಟೆ ಅವರ ಕಾಲದ ಚಪ್ಪಲಿ, ಅವರು ಬರೆಯುತ್ತಿರುವ ಮೇಜು, ಅಲ್ಲದೇ ಅವರು ಓದಿದ ಪುಸ್ತಕಗಳು ಇವೆ. ಇತ್ತೀಚೆಗೆ ಲೋಕಮಾನ್ಯರ ಅಪರೂಪದ ಧ್ವನಿ ಮುದ್ರಿಕೆ ಲಭಿಸಿದೆ. ೯೭ ವರ್ಷಗಳ ಹಿಂದೆ ತಿಲಕರು ಆಡಿದ ಮಾತು ಕರಾಚಿ ಉದ್ಯಮಿ ಸೇಠ್ ಲಕ್ಷ್ಮೀಚಂದ್ ನಾರಂಗ್ ಅವರ ಟೇಪ್ ರೆಕಾರ್ಡರಿನಲ್ಲಿ ಮುದ್ರಿತವಾಗಿತ್ತು. ೧೯೧೫ ಸೆಪ್ಟೆಂಬರ್ ೨೧ ರಂದು ಪುಣೆಯ ಕೇಸರಿವಾಡ (ತಿಳಕರ ಮನೆ) ಆಯೋಜಿಸಲಾಗಿದ್ದ ಗಣೇಶೋತ್ಸವದ ಸಂಗೀತ ಕಾರ್ಯಕ್ರಮಕ್ಕೆ ಸೇರಿದ್ದ ಜನಸ್ತೋಮ ನಿಯಂತ್ರಿಸಲು ಸುಮಾರು ೧ ನಿಮಿಷದಷ್ಟು ಮಾತನಾಡಿದ ಧ್ವನಿಯು ದಾಖಲಾಗಿದೆ. 'ಸಾರ್ವಜನಿಕರು ಮೌನದಿಂದ ಇರಬೇಕೆಂದು ನನ್ನ ವಿನಂತಿ. ಕಾರ್ಯಕ್ರಮ ನಿಗದಿತ ಸಮಯಕ್ಕೆ ಪ್ರಾರಂಭ ವಾಗುತ್ತದೆ. ತಾಳ್ಮೆ ಇಲ್ಲದವರು ಹೊರಗೆ ಹೋಗಬಹುದು' ಇದು ದಾಖಲೆ ಆದ ಧ್ವನಿ.

ಬಾಲಗಂಗಾಧರ ತಿಲಕರನ್ನು ತಿಲಕ, ಟಿಳಕ್, ಲೋಕ ಮಾನ್ಯ ಎಂದು ಕರೆದರೂ 'ಟಿಳಕ್' ಎಂಬುದು ಸರಿಯಾದ ಮೂಲ ಹೆಸರು ಎಂದು ಡಾ. ಸೂರ್ಯನಾಥ ಕಾಮತರ ಅಭಿಪ್ರಾಯ.





# ಪರಿಸರ ರಕ್ಷಣೆ ನಮ್ಮೆಲ್ಲರ ಹೊಣೆ

– ತದ್ದಲಸೆ ವಿಘ್ನೇಶ್ವರ ಶರ್ಮ *

ಪ್ರತಿಯೊಬ್ಬನಿಗೂ ಅವನದೇ ಆದ ಜೀವನ ಸಂಹಿತೆ ಇದೆ. ಅಂದರೆ ಧರ್ಮವಿದೆ. ಈ ಧರ್ಮವನ್ನು ಆಧರಿಸಿ ಅನುಷ್ಠಾನಗೊಳಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ. 'ಧರ್ಮೋ ರಕ್ಷತಿ ರಕ್ಷಿತಃ'. ನಮ್ಮಲ್ಲಿ ಧರ್ಮ ರಕ್ಷಣೆಯ ಉತ್ಕಟ ಭಾವವಿರ ಬೇಕು. ನಮಗಾಗಿ ಧರ್ಮ. ಅದಕ್ಕಾಗಿ ನಾವಲ್ಲ. ನಾವು ಅದನ್ನು ಉಳಿಸಿಕೊಳ್ಳದಿದ್ದರೆ ಅದಕ್ಕೇನೂ ತೊಂದರೆ ಇಲ್ಲ. ಅದರ ಅನಾದರ ನಿರಪೇಕ್ಷತೆಯಿಂದ ನಾವೇ ತೊಂದರೆ ತಂದುಕೊಂಡಂತಾಗುತ್ತದೆ.

ಹಾಗೇ ಪ್ರಕೃತಿ, ಪರಿಸರಗಳದ್ದೂ ಆಗಿದೆ. ಅವು ನಮಗಾಗಿಯೇ ಇದ್ದದ್ದು. ನಾವು ಅವುಗಳಿಂದ ಭಿನ್ನರಾಗಿ ಉಳಿಯುವಂತಿಲ್ಲ. ಹಾಗೆ ಉಳಿದರೆ ಭಿನ್ನರಾಗಬೇಕಾಗುತ್ತದೆ. ಪ್ರತಿ ಹೆಜ್ಜೆ–ಹೆಜ್ಜೆಗೂ ಅದರ ಸಂಪರ್ಕ–ಸಹಕಾರ ಇರಬೇಕು. ನಾವು ಹುಟ್ಟುವ ಪೂರ್ವದಲ್ಲೇ ಅವು ಮುಂದಾಗಿ ಬಂದಿವೆ. ಯಾಕೆ ಎಂಬುದನ್ನು ಅರಿಯಬೇಕು. ನಮಗಾಗಿಯೇ ಅವು, ಮಾನವನ ಸ್ವಾಸ್ಥ್ಯ–ಉತ್ಕರ್ಷದ ದೃಷ್ಟಿ ಅವಕ್ಕೆ. ಇದನ್ನು ಅರ್ಥೈಸಿ ಕೊಳ್ಳದಿದ್ದರೆ ಅವಕ್ಕೇನೂ ನಷ್ಟವಿಲ್ಲ. ರೋಗಿಯಾದವನಿಗೆ ಔಷಧ. ಅದನ್ನು ತೆಗೆದುಕೊಳ್ಳದಿದ್ದರೆ ಔಷಧಕ್ಕೇನೂ ಹಾನಿಯಲ್ಲ. ನಾವೇ ತೊಂದರೆ ಪಡಬೇಕು.

ಈ ಸೃಷ್ಟಿಯಲ್ಲಿ ಪ್ರಥಮತಃ ಕಾಣಿಸಿದ್ದು ಆಕಾಶ. ಅದರಿಂದ ವಾಯು, ನಂತರ ಅಗ್ನಿ. ಇದರಿಂದ ಜಲ. ಆಮೇಲೆ ನೆಲ. ಪೃಥ್ವಿ ಇದರಿಂದ ಔಷಧಿ, ವನಸ್ಪತಿ. ಅನ್ನ–ಆಹಾರ ನಂತರ ಪುರುಷ ಪ್ರಪಂಚ. ('ಆಕಾಶಾತ್ ವಾಯುಃ ವಾಯೋ ರಗ್ನಿಃ, ಅಗ್ನೇರಾಪಃ, ಆಪಃ ಪೃಥಿವೀ, ಪೃಥಿವ್ಯಾ ಔಷಧಯಃ, ಔಷಧೀ ಭ್ಯೋನ್ನಂ, ಅನ್ನಾತ್ ಪುರುಷಃ) ಇದನ್ನು ತೈತ್ತರೀಯ ಉಪನಿಷತ್ತು ತಿಳಿಸುತ್ತದೆ. ಹೀಗೆ ಪ್ರಕೃತಿಯಿಂದಲೇ ಹೀಗೆಲ್ಲ ಸೃಷ್ಟಿಯಾಗಿ ಮಾನವನು ಬಹುಪೂರ್ವದಲ್ಲೇ ಇವೆಲ್ಲ ಸಿದ್ಧ ಗೊಂಡದ್ದು. ಇವುಗಳ ಮೂಲದಿಂದಲೇ ಬೃಹತ್ತಾಗಿ ವಿಕಾಸ ಗೊಂಡದ್ದು ಅಂದಾಗ ಈ ಪ್ರಕೃತಿ ಪರಿಸರಗಳೆಲ್ಲ ಮಾನವನ ರಕ್ಷಣೆ–ಪೋಷಣೆಗಾಗಿ ಎಂಬುದು ಸ್ಪಷ್ಟ. ಈ ಕಾರಣದಿಂದಲೇ ಪ್ರಕೃತಿ ಪರಿಸರಗಳು ನಮ್ಮ ಸಂಗಾತಿಗಳು. ಅವುಗಳ ಸಂಬಂಧ ಅವಿಭಾಜ್ಯ.

ಈ ಪ್ರಾಕೃತಿಕ ಬಂಧುತ್ವ ನಮಗೂ ಅದಕ್ಕೂ ಅನ್ಯೋನ್ಯ ಆಶ್ರಯ–ಆಶ್ರಿತ. ನಾವು ಬದುಕುವುದಕ್ಕೆ ಅವು ಉದಾರವಾಗಿ ಸಹಕರಿಸುತ್ತವೆ. ಅವುಗಳ ಪ್ರಯೋಜನ ಪಡೆಯುತ್ತೇವೆ. ನಾವು ಇಲ್ಲಿ ಅವನ್ನು ಪ್ರೀತಿಸಿ ಬೆಳಸಿದರೆ ಸಾಕು. ಅವು ನಮಗೆ ಸದಾ ರಕ್ಷಕನಂತೆಯೇ ಇರುತ್ತವೆ. ಮಣ್ಣು–ನೀರು–ಗಾಳಿ, ಶಾಖ, ಆಕಾಶ ಈ ತತ್ತ್ವಗಳನ್ನು ಬಿಟ್ಟು ಪ್ರಪಂಚವೇ ಇಲ್ಲ. ಇವುಗಳ ಪಂಚೀಕರಣವೇ ಪ್ರಪಂಚ. ನೆಲ ನಮಗೆ ನೆಲೆ ನೀಡಿ ಆಶ್ರಯ ವಾದದ್ದು. ಆಹಾರದ ಉತ್ಪತ್ತಿಗೆ ಬೆಳೆ ಬೇಸಾಯಕ್ಕೆಲ್ಲ ಅವಶ್ಯ ಬೇಕು. ನೀರು–ಗಾಳಿ, ಅಗ್ನಿಯ ಶಾಖ ಬೆಳಕುಗಳು ಇಲ್ಲದಿದ್ದರೆ ಒಂದು ಕ್ಷಣವೂ ಬದುಕಲಾರೆವು. ಇವೆಲ್ಲ ಪ್ರಾಕೃತಿಕ ಕೊಡುಗೆ ಯೆಂದೇ ತಿಳಿಯಬೇಕು. ಯಾವಾಗಲೂ ಅದರ ಅನುಗ್ರಹ ಇರಬೇಕು. ಈ ಪರಿಸರದಲ್ಲಿಯೇ ಇನ್ನೂ ಅನೇಕ ಪ್ರಾಣಿಗಳೂ –ಪಶು ಪಕ್ಷಿಗಳೂ, ಕ್ರಿಮಿ–ಕೀಟಾದಿಗಳೂ ಇದ್ದು ಅವು ಸಹ ನಮ್ಮಂತೆಯೇ ಬದುಕುವುದಕ್ಕಾಗಿ ಬೆಳೆಯುವುದಕ್ಕಾಗಿ ಉಪಕರಿಸುವುದಕ್ಕಾಗಿಯೇ ಬಂದವುಗಳಾಗಿವೆ. ಗಿಡ–ಮರ–ಸಸ್ಯ ಸಂಕುಲವೆಲ್ಲವೂ ಸಹ ಸಹಬಾಳ್ವೆಯ ಉಸಿರಿನಿಂದ ಹಸಿರಾಗಿ ಕಂಗೊಳಿಸುವಂತಾಗಿದೆ.

ಇಷ್ಟೊಂದು ಅನುಗ್ರಹ ಅನುಕೂಲಕರವಾಗಿದ್ದರೂ ಸಹ ಅವು ನೀಡುವ ಪ್ರಯೋಜನದ ದೃಷ್ಟಿಯಿಂದ ನಾವು ಅವುಗಳ ಬಗ್ಗೆ ಇರಿಸಿಕೊಂಡ ಕಾಳಜಿ ಆಸಕ್ತಿ ತೀರ ಕಡಿಮೆ, ಪ್ರೀತಿಯಿಂದ ಬೆಳಸುವುದಿರಲಿ, ಹಾಳು ಮಾಡದೇ ಇದ್ದರೂ ಅವು ಉಪಕೃತ ವೆಂದೇ ತಿಳಿಯುತ್ತೇವೆ. ನಮ್ಮಲ್ಲಿ ವೃಕ್ಷಗಳನ್ನು ನೆಟ್ಟು ಬೆಳಸುವವರು ತೀರ ಕಡಿಮೆ. ತಮ್ಮ ಕೃಷಿ ಕ್ಷೇತ್ರದ ಅಡಿಕೆ, ತೆಂಗು, ಮಾವು ಮುಂತಾದವುಗಳನ್ನು ಹಣ ಗಳಿಕೆಯ ಉದ್ದೇಶಕ್ಕಾಗಿ ಕೆಲವರು ಅಷ್ಟನ್ನೇ ಬೆಳಸುತ್ತಾರೆ. ಆದರೆ ಉಳಿದ ಸ್ಥಳಗಳಲ್ಲಿ ಪ್ರಕೃತಿಯೇ ಅದಕ್ಕೆ ನೆಲ–ನೀರು–ಬೆಳಕು

* ಅಂಚೆ ಹುಣಸೇಕೊಪ್ಪ ಶಿರಸಿ, ಉತ್ತರ ಕನ್ನಡ ಜಿಲ್ಲೆ – ೫೮೧ ೪೦೧.

ನೀಡಿ ಬೆಳೆಯುವಂತೆ ಮಾಡುತ್ತದೆ. ಅದು ವಿಶಾಲವಾಗಿ ಬೆಳೆದು ಕ್ವಾಯಿ-ಎಲೆ-ಹಣ್ಣುಗಳನ್ನೆಲ್ಲ ನಮಗೆ ಅನಿರ್ಬಂಧಿತವಾಗಿ ಪಡೆಯಲು ಅವಕಾಶ ನೀಡುತ್ತವೆ. ಮನೆಯ ಸುತ್ತಮುತ್ತಲಿನ ಜಾಗದಲ್ಲಿ ಬೆಟ್ಟ-ಬೇಣಗಳಲ್ಲಿ ಸೊಂಪಾಗಿ ಬೆಳೆದು ಹಸಿರಾಗಿ ಕಂಗೊಳಿಸಿ ತಂಪೆರಚಿ ನಮ್ಮ ಉಸಿರಿಗೆ ಬಲನೀಡಿ ಆರೋಗ್ಯಕ್ಕೆ ಅನುಕೂಲಿಸಿದರೂ ಸಹ ಈ ವೃಕ್ಷ ಪ್ರೀತಿ ಯಾಕೆ ಬೆಳೆಯುವುದಿಲ್ಲವೋ ತಿಳಿಯದು. ಅಶ್ವತ್ಥ-ಅತ್ತಿ ಮುಂತಾದುವುಗಳಿಗೆ ದೇವತಾಭಾವ ನೀಡಿದ್ದೂ ಇದೆ. ಅಶ್ವತ್ಥ ವೃಕ್ಷಕ್ಕೆ ಕಟ್ಟೆ ಕಟ್ಟಿ, ಉಪನಯನ ಮಾಡಿ ನಿತ್ಯ ಪ್ರದಕ್ಷಿಣೆ ಮಾಡಿದರೆ ಹಲವು ರೋಗಗಳಿಗೂ ಗ್ರಹಬಾಧೆಗೂ ಪರಿಹಾರವೆಂದು ಶಾಸ್ತ್ರಗಳು ತಿಳಿಸಿದ್ದೂ ಇದೆ. ಸಂತಾನವಿಲ್ಲದಿದ್ದವರು ಈ ಬಗೆಯ ಪ್ರಯೋಜನ ಪಡೆದದ್ದುಂಟು. ತನ್ನನ್ನು ಕಡಿಯಲು ಬಂದವನಿಗೂ ನೆಳಲು ಒದಗಿಸಿ ತಂಪು ಬರುವ ಉದಾರ ಮನಸ್ಸು ಅವುಗಳದ್ದು. ನಾವು ಬಿಡುವ ನಿಷಿದ್ಧ ಉಸಿರಾಟದ ಗಾಳಿಯನ್ನು ತಾನು ಹೀರಿಕೊಂಡು ಶುದ್ಧ ಗಾಳಿ-ಪ್ರಾಣವಾಯು ನೀಡಿ ಸತ್ಕರಿಸುವ ಪ್ರವೃತ್ತಿ ಅದರದು. ಆದರೂ ಮನುಷ್ಯ ಕರುಣೆ ತೋರದೇ ಕಡಿದು ಹಾಕುವುದು ಎಷ್ಟು ನಿಕೃಷ್ಟ ದುಷ್ಟ ಕಾರ್ಯವೆಂದು ತಿಳಿಯುವುದೇ ಇಲ್ಲ.

ಮಹಾಭಾರತದ ಯುದ್ಧಾನಂತರ ಶರಶಯ್ಯೆಯಲ್ಲಿ ಮಲಗಿದ ಭೀಷ್ಮರ ಹತ್ತಿರ ಧರ್ಮರಾಜ-ರಾಜ್ಯಭಾರದ ವಿಚಾರ ಕೇಳಿ ತಿಳಿಯಲು ಬಯಸುತ್ತಾನೆ. ರಾಜನಾದವನು ಏನೇನು ಮಾಡಬೇಕು? ಪ್ರಜೆಗಳಿಗೆ ಯಾವ ಯಾವ ವ್ಯವಸ್ಥೆ ಕಲ್ಪಿಸಿ ಕೊಡಬೇಕೆಂದು ತಿಳಿಯ ಬಯಸುತ್ತಾನೆ. ಆ ಭೀಷ್ಮರು ಹೀಗೆ ಉಪದೇಶಿಸಿದ-

*ಪುಷ್ಪೈಃ ಸುರಗಣಾನಾಃ ವೃಕ್ಷಾಃ ಫಲೈ ಶ್ಚಾಪಿ ತಥಾಪಿತೃನ್*
*ಛಾಯ ಯಾ ಚಾ ತಿಥಿಂ ತಾತ, ಪೂಜಯಂತೀ ಮಹೋರುಹಃ*

ಬೆಳೆಯುವ ವೃಕ್ಷಗಳು ಹೂವುಗಳಿಂದ ದೇವತೆಗಳನ್ನು ಫಲಗಳಿಂದ ಪಿತೃಗಳನ್ನು ನೆರಳಿನಿಂದ ಅತಿಥಿಗಳನ್ನು ಸತ್ಕರಿಸುತ್ತವೆ. ಹೀಗಾಗಿ ವೃಕ್ಷಗಳು ಗೃಹಸ್ಥ ಧರ್ಮಕ್ಕೆ ಸಮಾನವಾದದ್ದೆಂದು ತಿಳಿಯಬೇಕು.

*ತಸ್ಮಾತ್‌ಡಾಗೇ ವೃಕ್ಷಾರೋಪ್ಯಾಃ ಶ್ರೇಯೋರ್ಥಿನಾಸದಾ।*
*ಪುತ್ರವತ್ ಪರಿಪಾಲ್ಯಾಶ್ಚ ಪುತ್ರಾಸ್ತೇ ಧರ್ಮತಃ ಸ್ಮೃತಃ ॥*

ಹೀಗೆ ಸರೋವರ ನೀರ ಕಾಲುವೆ, ವೃಕ್ಷಗಳನ್ನು ನೆಡುವುದು, ಬೆಳಸುವುದು ನಮ್ಮ ಪ್ರಾಚೀನರು ಅನುಭವದಿಂದ ತಿಳಿದು ಹೇಳಿದ್ದು. ಈ ವೃಕ್ಷಗಳ ಪೂಜಾ ಆರಾಧನಾ ಕ್ರಮವೂ ಇದೆ. ಪೃಥ್ವಿಯನ್ನು ಪೂಜಿಸುವುದು, ಜಲದೇವತೆಯನ್ನು ಅರ್ಚಿಸುವುದು, ಅಗ್ನಿಯನ್ನು ನಿತ್ಯವೂ ಆರಾಧಿಸುವುದು, ಇವೆಲ್ಲ ನಮ್ಮ ಧರ್ಮ ಸೂತ್ರದಲ್ಲೇ ಸೇರಿವೆ. ಪ್ರಕೃತಿಯ ಪೂಜೆಯೂ ಉಂಟು. ನಮ್ಮ ರುದ್ರಾಧ್ಯಾಯದಲ್ಲಿ 'ನಮೋ ವೃಕ್ಷೇಭ್ಯೋ' ಎಂದು ಈ ವೃಕ್ಷರೂಪಿ ರುದ್ರನಿಗೆ ನಮಸ್ಕಾರ ಹೇಳಿದೆ. ಇವುಗಳ ಪ್ರಯೋಜನ- ಉಪಯುಕ್ತತೆ ತಿಳಿದೇ ಪ್ರಕೃತಿಯನ್ನು ಅದರ ಅಂತರ್ಯದಲ್ಲಿದ್ದ ಸುಪ್ತ ಸಂಪತ್ತನ್ನೂ ಅರಿತು ಮನುಕುಲದ ಈ ಆತ್ಮೀಯ ಸಂಗಾತಿಯ ಪ್ರಭಾವವನ್ನು ಪಡೆದುಕೊಳ್ಳಲೆಂದೇ ಅದಕ್ಕೊಂದು ಪೂಜ್ಯತೆ ಗೌರವ ತಂದದ್ದಾಗಿದೆ. 'ವೃಕ್ಷೋ ರಕ್ಷತಿ ರಕ್ಷಿತಃ' ಎಂದೂ ಹೇಳಲಾಗಿದೆ. ವೃಕ್ಷ ಕಡಿದವನು ಭಿಕ್ಷೆ ಬೇಡಬೇಕಾಗುತ್ತದೆ, ಹಸಿರು ಅಳಿದು ಭೂಮಿ ಬರಡಾದ ಮೇಲೆ ಅಲ್ಲಿ ಏನನ್ನೂ ಬೆಳೆಯಲಾಗುವುದಿಲ್ಲ. ನೀರಿನ ಅಭಾವವೂ ಆಗಿ ಬಿಸಿಲಿನ ತಾಪದಿಂದ ಕಂಗೆಡುವ ಪ್ರಸಂಗವೂ ಬರಬಹುದಾಗಿದೆ.

ಹಿಂದೆ ಕೆಲವು ಪ್ರದೇಶಗಳನ್ನು ಒಳಗೊಂಡು ವೃಕ್ಷ ಸಮೂಹವಿದ್ದ ದೇವರವನದಲ್ಲಿ ವರ್ಷದ ಒಂದೆರೆಡು ಸಾರೆ ವನಭೋಜನದ ವ್ಯವಸ್ಥೆ ಇರುತ್ತಿತ್ತು. ಆಗ ಆ ಪ್ರದೇಶದಲ್ಲಿ ಜನರೆಲ್ಲ ಸೇರಿ ಅದಕ್ಕೆ ಸಂಬಂಧಿಸಿದ ದೇವರ ಚರಮೂರ್ತಿ ಒಯ್ದು ಪೂಜಿಸಿ ನೈವೇದ್ಯಕ್ಕಾಗಿ ಋತುಮಾನಕ್ಕೆ ಸಂಬಂಧಿಸಿದ ಖಾದ್ಯ ಪಕ್ವಾನ್ನ ಮಾಡಿ ಅರ್ಪಿಸಿ ಎಲ್ಲರೂ ಸಹ ಭೋಜನ ಮಾಡುವ ಸಂಪ್ರದಾಯವೂ ಇತ್ತು. ಇದು ಮೈಗೂ-ಮನಸ್ಸಿಗೂ ಹೆಚ್ಚಿನ ಸ್ವಾಸ್ಥ್ಯಕ್ಕಾಗಿ ಬಂದಿತ್ತು. ಇಂಥ ಹಲವು ಆಚರಣೆಗಳು ಈ ಪ್ರಕೃತಿ ಪರಿಸರಗಳನ್ನು ಪ್ರೀತಿಸಲೆಂದೇ ಬಂದಿತ್ತು. ಇಂದು ಅವು ಕೆಲವು ಕಡೆ ಇದ್ದರೂ ಕಾಟಾಚಾರಕ್ಕಾಗಿ ಆಗುವಂತಾಗಿದೆ. ಉದ್ದೇಶಕ್ಕೆ ಗಮನವಿಲ್ಲದೇ ಆಚರಣೆ ಮಾತ್ರ ಇದೆ.

ಈ ಪ್ರಕೃತಿ ಪರಿಸರಗಳಿಂದಲೇ ನಮ್ಮ ಸಂಸ್ಕೃತಿ ಬೆಳೆಯುತ್ತ ಬಂದಿರುವುದು. ಅದರ ಚೆಲುವು-ನಿಲುವುಗಳಲ್ಲಿ ಶುಚಿಯ ರುಚಿಯ ಸಂತೋಷದ ಸಂಸ್ಕಾರ ಸಿಗುತ್ತದೆ. ಈ ಪ್ರಕೃತಿ ಹೀಗೆಯೇ ಇರಬೇಕೆಂದು ನಾವು ಹೇಳುವಂತಿಲ್ಲ. ಅದೇ ತನ್ನ ಚಿತ್ರಣ ಸೌಂದರ್ಯ ನಿರ್ಮಿಸಿಕೊಳ್ಳುತ್ತದೆ. ಒಂದೊಂದು ಕಡೆ ಒಂದೊಂದು ವಿಧ. ಮೋಡಗಳ ಚಿತ್ತಾರದಂತೆ, ಪ್ರಕೃತಿಯೇ ಕುಂಚ ಹಿಡಿದು ಬರೆದು ಬಣ್ಣ ತುಂಬಿದಂತೆ! ವೃಕ್ಷರಾಶಿಯಲ್ಲೂ ಎಷ್ಟೊಂದು ಬಣ್ಣ ವೈವಿಧ್ಯ? ಭೂಮಿಯ ಮಣ್ಣು ನೀರು ಒಂದೇ ಆದರೂ ಮೂಲಬೀಜದ ಕಾಂಡದ ಸಂಸ್ಕಾರದಂತೆ ಎಷ್ಟೊಂದು ವರ್ಣಮಯವಾಗಿ ಕಾಣಸಿಗುತ್ತದೆ. ಈ ಸಂಬಂಧ ಎಲ್ಲಿಂದ ಬಂತು? ಹೂವಿನಲ್ಲಿ ಪರಿಮಳ-ಮಕರಂದ ಯಾರು ತಂದು ತುಂಬಿದರು? ಇವನ್ನೆಲ್ಲ ಸೂಕ್ಷ್ಮವಾಗಿ ಆಲೋಚಿಸಿದರೆ ಆ ಪ್ರಕೃತಿಯ ಬಗ್ಗೆ ಗೌರವ-ಆದರ ಮೂಡದೇ ಇರುತ್ತದೆಯೇ? ಹಾಗಾಗಿ ಅದನ್ನೇ ದೇವರು ಅಂತಲೂ ತಿಳಿದರು. ಒಂದರಂತೆ ಮತ್ತೊಂದಿಲ್ಲ. ಇವುಗಳದ್ದೇ ವಿರಾಟ್ ಪ್ರಪಂಚ. ಅಂದಾಗ ಅದಕ್ಕೂ ಒಬ್ಬ ಕರ್ತಾರ ಇರಲೇಬೇಕಲ್ಲ?

ಮಾರ್ಕಾಂಡೇಯ ಮಹರ್ಷಿ ಭವಿಷ್ಯವನ್ನು ನಿರೀಕ್ಷಿಸಿದವನು. ಆತ

*'ಯಾವದ್ಭೂಮಂಡಲಂ ಧತ್ತೇ ಸಶೈಲ ವನಕಾನನಂ'*
*ತಾವತ್ತಿಷ್ಠತಿ ಮೇ ದಿನ್ನಾಂ ಸಂತತಿಃ ಪುತ್ರ ಪೌತ್ರಿಕೀ'*

ಅಂದರೆ ಈ ಭೂಮಂಡಲದಲ್ಲಿ ಎಲ್ಲಿಯವರೆಗೆ ವನ-ಗಿರಿ-ಕಾನನಗಳು ಸುಸ್ಥಿರವಾಗಿ ಇರುತ್ತವೆಯೋ ಅಲ್ಲಿಯವರೆಗೂ ನಮ್ಮ ಸಂತತಿಯವರು ಸುಖವಾಗಿ ಇರಬಹುದು ಅಂತ ಹೇಳಿದ್ದಾನೆ.

ಮದುವೆಯಾದ ವಧುವು ತನ್ನ ಗಂಡನ ಮನೆಗೆ ಹೋಗು ವಾಗ ವಂಶವೃಕ್ಷದ ಸಂಕೇತವಾಗಿ ತೆಂಗಿನ ಇನ್ನಿತರ ಹೂವು ಹಣ್ಣಿನ ಗಿಡ ಒಯ್ಯಬೇಕೆಂದೂ ಹಾಗೂ ಅದನ್ನು ನೆಟ್ಟು ಬೆಳಸಬೇಕೆಂಬುದು ಶಾಸ್ತ್ರದ ಆದೇಶ. ಅನಿವಾರ್ಯ ಪ್ರಸಂಗ ದಲ್ಲಿ ಮರಕಡಿಯಲೇ ಬೇಕಾದಾಗ ಒಂದು ಗಿಡಕ್ಕೆ ಮೂರು ಗಿಡಗಳನ್ನು ನೆಟ್ಟು ಬೆಳಸಬೇಕೆಂಬುದಾಗಿ ಹೇಳುತ್ತಾರೆ. ಗಿಡ ಕಡಿದಾಗ ಪರಿಸರದ ಮೇಲೆ ಆಗುವ ನಷ್ಟವನ್ನು ತುಂಬಿಕೊಡ ಬೇಕೆಂಬುದು ಇದರ ಅಂತರಾರ್ಥ. ಈ ವೃಕ್ಷಗಳಲ್ಲಿರುವ ಜೀವ ಚೈತನ್ಯವನ್ನು ಹರಣ ಮಾಡುವ ಅಧಿಕಾರ ಮಾನವನಿಗೆ ಇಲ್ಲ. ಪ್ರಕೃತಿಯೇ ಅದನ್ನು ಬೆಳಸಿದ್ದು. ಅದನ್ನು ಕಡಿದು-ತರಿದು ಹಾಕುವುದೇ ವಿಕೃತಿ. ಹಾಗೆ ಮಾಡಿದರೆ ನಮ್ಮ ಸಂಸ್ಕೃತಿಯನ್ನೇ ತುಳಿದಂತೆ ಆಗುತ್ತದೆ. ಅವು ನಮ್ಮ ರಕ್ಷಣೆ ಗಾಗಿಯೇ ಇದ್ದುದನು ಹಣದ ಆಸೆಗೆ ನಾವೇ ಕಡಿದರೆ ಕೃತಘ್ನರಾಗುತ್ತೇವೆ. ಭವಿಷ್ಯವನ್ನು ಹಾಳುಮಾಡಿಕೊಂಡಂತೆ ಆಗುತ್ತದೆ. ವೃಕ್ಷಗಳನ್ನು ಸೃಷ್ಟಿಸಿ ಬೆಳಸುವುದು ಪ್ರಕೃತಿಯ ಧರ್ಮ ಅದನ್ನು ರಕ್ಷಿಸಿ ಪೋಷಿಸುವುದು ನಮ್ಮ ಸಂಸ್ಕೃತಿಯ ಮರ್ಮ. ಪ್ರತಿಯೊಬ್ಬನಿಗೂ ದಯಾಪರತ್ವ ಇರಬೇಕು. ಭಯೋಪಾಸನೆ ಖಂಡಿತ ಸಾಧುವಲ್ಲ. ದಯೆ ಕರುಣೆ ಇದ್ದವನು ಇನ್ನೊಂದು ಜೀವವನ್ನು ಆತ್ಮಚೈತನ್ಯವನ್ನು ತನ್ನಂತೆಯೇ ತಿಳಿಯುತ್ತಾನೆ, ಪ್ರೀತಿಸುತ್ತಾನೆ. ಒಮ್ಮೆ ತಾಯಿ-ಮಗ ಇಬ್ಬರನ್ನೂ ಕಟ್ಟಿಗೆ ತರಲು ಕಾಡಿಗೆ ಹೋದರು. ಮಗ ಒಣಗಿ ಬಿದ್ದ ಕಟ್ಟಿಗೆಯನ್ನೇ ಸಂಗ್ರಹಿಸಿದ. ತಾಯಿ ಹಲವು ಗಿಡಗಳನ್ನು ಕಡಿದು ಹೊರೆ ಮಾಡಿದಳು. ಮಗ ಇದನ್ನು ಕಂಡು ತಾಯಿಯಿಂದ ಕತ್ತಿ ಪಡೆದು ತನ್ನ ಕಾಲಿನ ಚರ್ಮವನ್ನೇ ಕೆತ್ತಿಕೊಂಡ. ತಾಯಿ ಇದನ್ನು ಕಂಡು 'ಅಯ್ಯೋ! ಯಾಕೆ ಹೀಗೆ ಮಾಡಿಕೊಂಡೆ ಮಗನೇ ಅಂತ ದುಃಖಿಸಿದಳು. ಆಗ ಮಗ ಹೇಳಿದ 'ಅಮ್ಮಾ, ನೀನು ಹಲವು ಗಿಡಗಳನ್ನು ಸವರಿದೆ. ಅವಕ್ಕೂ ನೋವಾಗುವುದಿಲ್ಲವೇ? ಮಾತನಾಡಲು ಬರುವುದಿಲ್ಲವೆಂದು ತಿಳಿದುಬಿಟ್ಟೆ. ಎಲ್ಲ ಜೀವ-ಆತ್ಮ ಒಂದೇ ಅಲ್ಲವೇ? ಅಂತ ಕೇಳಿದ. ಆಗ ತಾಯಿಗೆ ಜ್ಞಾನೋದಯ ವಾಯಿತು. ಮುಂದೆ ಈತನೇ ನಾಮದೇವನೆಂದು ಸಾಧು ಸಂತರಲ್ಲಿ ಒಬ್ಬನಾದದ್ದು ಇತಿಹಾಸ. ಹಾಗಾಗಿ ಎಲ್ಲವನ್ನು ತನ್ನಂತೆಯೇ ನೋಡುವ ಭಾವ-ಯೋಗ ಎಲ್ಲರಲ್ಲೂ ಇರಬೇಕು. ಬೆಳೆಯಬೇಕು.

❀

**ಸಿದ್ಧಗಂಗಾ ಮಾಸಪತ್ರಿಕೆ**
**ಚಂದಾದಾರರ ಗಮನಕ್ಕೆ**

ಚಂದಾದಾರರ ಸರಿಯಾದ ವಿಳಾಸವಿಲ್ಲದೆ ಪತ್ರಿಕೆಗಳು ನಮ್ಮ ಕಾರ್ಯಾಲಯಕ್ಕೆ ಹಿಂದಕ್ಕೆ ಬರುತ್ತಿವೆ. ಚಂದಾದಾರರ ಸಂಖ್ಯೆ ಹಾಗೂ ಅಂಚೆ ಪಿನ್‌ಕೋಡ್ ತಾವು ದಯವಿಟ್ಟು ವಿಳಾಸ ಬದಲಾವಣೆಯಾದಲ್ಲಿ ಚಂದಾದಾರರ ಸಂಖ್ಯೆ ಹಾಗೂ ಅಂಚೆ ಪಿನ್‌ಕೋಡ್ ಇರುವ ಸರಿಯಾದ ವಿಳಾಸದ ಜೊತೆಗೆ ಮೊಬೈಲ್ ಫೋನ್‌ಸಂಖ್ಯೆ ಸಹ ಪತ್ರಿಕೆ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

– ಪ್ರಕಾಶಕರು

## ಡಾಬಸ್‌ಪೇಟೆಯಲ್ಲಿ ನಡೆದ
# ಅಭೂತಪೂರ್ವ ಗುರುವಂದನ ಸಮಾರಂಭ

- ವರದಿ : ಬಿ.ಎಂ. ಪರಮೇಶ್ವರಪ್ಪ



ಗುರುವಂದನ ಸಮಾರಂಭದ ವೇದಿಕೆಯಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು, ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು, ಆದಿಚುಂಚನಗಿರಿ ಶಾಖಾ ಮಠದ ಶ್ರೀ ಶ್ರೀ ಸೌಮ್ಯನಾಥ ಮಹಾಸ್ವಾಮಿಗಳವರು, ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ಶ್ರೀ ವೀರೇಂದ್ರ ಹೆಗ್ಗಡೆಯವರು, ಕೇಂದ್ರ ಸಚಿವರಾದ ಶ್ರೀ ಡಿ.ವಿ. ಸದಾನಂದ ಗೌಡರು, ವಿರೋಧಪಕ್ಷದ ನಾಯಕರಾದ ಶ್ರೀ ಜಗದೀಶ ಶೆಟ್ಟರ್, ವಿಧಾನ ಪರಿಷತ್ ಸಭಾಪತಿಗಳಾದ ಶ್ರೀ ಡಿ.ಹೆಚ್. ಶಂಕರಮೂರ್ತಿ, ಮಾಜಿ ಸಚಿವರಾದ ಶ್ರೀ ಸಿ. ಚನ್ನಿಗಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ತಾಯಿ ಗರ್ಭದಿಂದ ಹೊರಬಂದ ಕ್ಷಣದಿಂದ ಉಸಿರಾಡುವ ಪ್ರತಿಯೊಂದು ಜೀವಿಯ ಹಲವು ರೂಪದ ಉಪಕಾರ(ಋಣ) ಪಡೆದು ಬದುಕುವುದು ಅನಿವಾರ್ಯವಾಗಿದೆ. ಇದನ್ನು ಅರಿಯುವ ಮಾರ್ಗ ಗೊತ್ತಿರುವುದು ಮನುಷ್ಯ ಜೀವಿಗೆ ಮಾತ್ರ. ಹೀಗೆ ಪಡೆದ ಉಪಕಾರವನ್ನು ಕೃತಕೃತ್ಯಭಾವ ದಿಂದ ಸ್ಮರಿಸಿ, ಸಾಧ್ಯವಾದಷ್ಟು ಸೇವೆ ಸಲ್ಲಿಸುವುದೇ ಮನುಷ್ಯನ ಗುರಿಯಾದಾಗ ಅದು ಸಾರ್ಥಕ ಜೀವನವೆನಿಸುವುದು. ತಮ್ಮ ವೈಯಕ್ತಿಕ ಬದುಕನ್ನು ಕಡೆಗಣಿಸಿ, ಪ್ರತಿಕ್ಷಣದಲ್ಲೂ ಸಮಾಜ ಸೇವೆಯನ್ನೇ ಉಸಿರಾಗಿಸಿಕೊಂಡು ಬದುಕಿದವರು ಮಹಾ ಮಾನವನವರ್ಗಕ್ಕೆ ಸೇರಿದವರು. ಅಂತಹವರಲ್ಲಿ ನಮ್ಮ ಕಣ್ಮುಂದೆ ತಕ್ಷಣ ಬರುವವರು ಮಾನವತಾವಾದಿ, ಸಂತ, ಶಿವಯೋಗಿ, ಕಾರಣಿಕಪುರುಷ, ಪುಣ್ಯಜೀವಿ ಹಾಗೂ ವಿದ್ಯಾರ್ಥಿಗಳಲ್ಲಿ ಭಗವಂತನನ್ನು ಕಂಡ ೧೦೭ ವರ್ಷದ ಶ್ರೀ ಸಿದ್ಧಗಂಗಾಮಠದ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು. ಪೂಜ್ಯರು ತಮ್ಮ ೮೫ ವರ್ಷಗಳ ಸೇವಾಜೀವನದಲ್ಲಿ, ಮಠದಲ್ಲಿ ಕಲಿತ ವಿದ್ಯಾರ್ಥಿಗಳ ಬದುಕನ್ನು ಹಸನು ಮಾಡಿ ಹಸನಾದ ಬಾಳಿಗೆ ಕಾರಣರಾಗಿದ್ದಾರೆ.

ಹೀಗೆ ಶ್ರೀಮಠದಿಂದ ಉಪಕಾರ ಪಡೆದವರು ಲಕ್ಷಾನುಲಕ್ಷ ಜನ. ಉಪಕಾರ ಪಡೆದು ಮರೆತವರು ಕೆಲವರು. ಸ್ಮರಿಸುವವರು ಮತ್ತೊಷ್ಟು ಜನ. ಪಡೆದ ಉಪಕಾರವನ್ನು ಸ್ಮರಿಸಿ ಸಾಧ್ಯವಾದಷ್ಟು ಸೇವೆ ಸಲ್ಲಿಸುವವರು ಮಗ ದೊಷ್ಟು ಜನ. ಆದರೆ ಪಡೆದ ಅಲ್ಪ ಉಪಕಾರವನ್ನು ಪರ್ವತ ಎಂದು ಪರಿಗಣಿಸಿ ತ್ರಿಕರಣ ಶುದ್ಧಿಯಾಗಿ ಶ್ರೀಮಠದ ಮತ್ತು ಪೂಜ್ಯರ ಸೇವೆಗಾಗಿ ಸದಾ ಸನ್ನದ್ಧರಾಗಿ, ಯಾವ ತ್ಯಾಗಕ್ಕಾದರೂ ಸಿದ್ಧರಾದವರು ಕೆಲವೇ ಜನ. ಅಂತಹವರಲ್ಲಿ ಶ್ರೀಮಠದ ಬಗ್ಗೆ ಗೌರವವುಳ್ಳವರು, ಸದುಹೃದಯಿಗಳು. ಶ್ರೀಗಳ ಬಗ್ಗೆ ಅಪಾರ ಭಕ್ತಿಯುಳ್ಳವರು, ಮಾಜಿ ಸಚಿವರು, ಹಳೆಯ





ವಿದ್ಯಾರ್ಥಿಯಾದ ಶ್ರೀ ಸಿ.ಚೆನ್ನಿಗಪ್ಪನವರು ಎಂದರೆ ಅತಿಶಯೋಕ್ತಿಯಲ್ಲ.

ಇಂದಿನ ದಿನಗಳಲ್ಲಿ ಸಣ್ಣ ಉಪಕಾರಕ್ಕೂ ವಂದನೆಗಳು ವಂದನೆಗಳು (Thanks, Thanks) ಎಂದು ಹೇಳುವುದು ಸಾಮಾನ್ಯ ಸಂಗತಿ. ಆದರೆ ಶ್ರೀ ಸಿದ್ಧಗಂಗಾ ಮಠದಿಂದ ಪಡೆದ ಉಪಕಾರವನ್ನು ಪ್ರಾಂಜಲ ಮನದಿಂದ ಸದಾ ಸ್ಮರಿಸುವ ಹಳೆಯ ವಿದ್ಯಾರ್ಥಿಯಾದ ಶ್ರೀ ಚನ್ನಿಗಪ್ಪನವರು ಪಡೆದ ಉಪಕಾರಕ್ಕೆ ಕೃತಜ್ಞತೆಯ ಸಂಕೇತವಾಗಿ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಗುರುವಂದನೆಯನ್ನು ಸಾವಿರಾರು ಜನರ ಸಮ್ಮುಖದಲ್ಲಿ ಸತ್‌ಸಂಕಲ್ಪದೊಂದಿಗೆ ಕಾರ್ಯರೂಪಕ್ಕೆ ತಂದ ಪುಣ್ಯಜೀವಿಗಳು.

ಸೋಂಪುರದ ಇತಿಹಾಸದಲ್ಲಿ ೨೧-೦೮-೨೦೧೪ ಸುವರ್ಣದಿನ. ಜನಸಾಗರವೋ ಸಾಗರ. ಸುತ್ತಲಿನ ಹಳ್ಳಿಗಳಿಂದ ಬಂದ ಜನರಿಗೆ ಹಬ್ಬದ ದಿನ. ಕಾರಣ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅಂತರಾಷ್ಟ್ರೀಯ ವಿದ್ಯಾಕೇಂದ್ರದಲ್ಲಿ ಅಪರೂಪದ ಕಾರ್ಯಕ್ರಮ. ಶ್ರೀ ಶಿವಕುಮಾರಮಹಾಸ್ವಾಮಿ ಗಳವರ ೧೦೭ನೇ ವರ್ಷದ ಗುರುವಂದನೆ. ಇದಕ್ಕಾಗಿ ದೊಡ್ಡ ವೇದಿಕೆ. ೨೪೦ ಅಡಿ ೪೦೦ ಅಡಿ ವಿಸ್ತಾರದ ಶಾಮಿಯಾನ, ಜೊತೆಗೆ ೩೦ ಸಾವಿರ ಕುರ್ಚಿಗಳ ಆಸನದ ವ್ಯವಸ್ಥೆ. ಪೂಜ್ಯರ ಹೆಸರಿನಲ್ಲಿ ಅವರ ಘನತೆಗೆ ಕುಂದುಂಟಾಗದಂತೆ ಶುಚಿರುಚಿ ಯಾದ ಉಪಹಾರ ಮತ್ತು ಮಧ್ಯಾಹ್ನ ಪ್ರಸಾದ ವ್ಯವಸ್ಥೆ. ಯಾವುದಕ್ಕೂ ಕೊರತೆಯಾಗದಂತೆ ಅಚ್ಚುಕಟ್ಟಾಗಿ ವ್ಯವಸ್ಥೆ ಮಾಡಿದ್ದು ಸೋಜಿಗದ ಸಂಗತಿ. ಅಂತಃಕರಣ ಶುದ್ಧಿಯಿಂದ ಒಬ್ಬ ವ್ಯಕ್ತಿ ಸತ್ಕಾರ್ಯ ಮಾಡುವ ಸಂಕಲ್ಪದೊಂದಿಗೆ ಕಾರ್ಯ ಪ್ರವೃತ್ತರಾದರೆ ಹೇಗೆ ನಡೆಯುತ್ತದೆ ಎಂಬುದಕ್ಕೆ ಅಂದಿನ ಕಾರ್ಯ ಸಾಕ್ಷಿಯಾಗಿತ್ತು. ಅಂತಹ ಅದ್ಭುತ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿ ಶ್ರೀ ಸಿ. ಚನ್ನಿಗಪ್ಪನವರು ಗುರುಕರುಣೆಗೆ ಪಾತ್ರರಾದರು. ಹೀಗೆ ಪೂಜ್ಯರ ೧೦೭ನೇ ವರ್ಷದ ಗುರು ವಂದನೆಯನ್ನು ಮೊದಲಿಗೆ ಸೋಂಪುರದಲ್ಲಿ ಮಾಡುವ ಭಾಗ್ಯ ಇವರಿಗೆ ದೊರೆತಿದ್ದು ಅವರ ಪುಣ್ಯದ ಫಲವೇ ಆಗಿದೆ.

ಕಾರ್ಯಕ್ರಮ ೧೧.೩೦ಕ್ಕೆ ಪ್ರಾರಂಭವಾಯಿತು. ನಿರೂಪಣೆ ನಡೆಸಿಕೊಟ್ಟ ಪ್ರೊ.ಹೆಚ್.ವಿ.ವೀರಭದ್ರಯ್ಯನವರ ಕೋರಿಕೆಯ ಮೇರೆಗೆ ವಿದ್ವಾನ್ ಪಿ.ಎಸ್. ಸಿದ್ಧಗಂಗಯ್ಯನವರು ಪ್ರಾರ್ಥನೆ ನೆರವೇರಿಸಿದರು. ಸಿ. ಚನ್ನಿಗಪ್ಪನವರ ಪುತ್ರರಾದ ಶ್ರೀ ಗೌರೀಶಂಕರ್ ರವರು ಸ್ವಾಗತ ಮಾಡುತ್ತ ಪೂಜ್ಯರನ್ನು ದೇವರೆಂದು ನಂಬಿದವರು ನಾವು. ಅವರು ಎಲ್ಲಿ ಕಾಲಿಟ್ಟರೂ ಮಳೆ ಬೆಳೆಯಾಗುತ್ತದೆ



ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ಶ್ರೀ ವೀರೇಂದ್ರ ಹೆಗ್ಗಡೆಯವರಿಂದ ನುಡಿ ನಮನ.



ಪರಮಪೂಜ್ಯ ಶ್ರೀ ಶ್ರೀಗಳವರ ಭಾವಚಿತ್ರ ಅನಾವರಣ ಶ್ರೀ ಡಿ.ವಿ. ಸದಾನಂದ ಗೌಡ ಅವರಿಂದ.



ಕೇಂದ್ರ ಸಚಿವರಾದ ಶ್ರೀ ಡಿ.ವಿ. ಸದಾನಂದ ಗೌಡರವರಿಂದ ಭಕ್ತಿ ಸಮರ್ಪಣೆ.



ಗುರುವಂದನ ಸಮಾರಂಭದ ರೂವಾರಿ
ಮಾಜಿ ಸಚಿವರಾದ ಶ್ರೀ ಸಿ. ಚನ್ನಿಗಪ್ಪ ಅವರಿಂದ ಪ್ರಾಸ್ತಾವಿಕ ನುಡಿ.




ವಿರೋಧಪಕ್ಷದ ನಾಯಕರಾದ
ಶ್ರೀ ಜಗದೀಶ ಶೆಟ್ಟರ್ ಅವರಿಂದ ನುಡಿ ನಮನ



ವಿಧಾನ ಪರಿಷತ್ ಸಭಾಪತಿಗಳಾದ
ಶ್ರೀ ಡಿ.ಹೆಚ್. ಶಂಕರಮೂರ್ತಿ ಅವರಿಂದ ಭಕ್ತಿ ನಮನ

ಎಂಬ ನಂಬಿಕೆ ನಮ್ಮದು. ಇದಕ್ಕೆ ಸಾಕ್ಷಿಯಾಗಿ ಹಿಂದಿನ ಹತ್ತು ವರ್ಷಗಳಿಂದ ಆಗದಂತ ಮಳೆ ಸಮಾರಂಭದ ಹಿಂದಿನ ದಿವಸ ಬಂದಿರುವುದಕ್ಕೆ ಜನರು ಸಂತಸ ಪಟ್ಟಿದ್ದಾರೆ. ಇಂತಹ ಪೂಜ್ಯರ ಗುರುವಂದನೆ ಮಾಡುವ ಭಾಗ್ಯ ನಮಗೆ ದೊರೆತಿರುವುದು ನಮ್ಮ ಪುಣ್ಯ. ಇಂತಹ ಪೂಜ್ಯರ ಗುರುವಂದನೆ ಮಾಡುವ ಭಾಗ್ಯ ನಮಗೆ ದೊರೆತಿರುವುದು ನಮ್ಮ ಪುಣ್ಯ ಇದೊಂದು ಮರೆಯಲಾಗದ ಸ್ಮರಣೀಯ ಸಭೆ ಎಂದರು. ಪೂಜ್ಯರನ್ನು ಸುತ್ತೂರು, ಆದಿಚುಂಚನಗಿರಿ ಶ್ರೀಗಳನ್ನು, ಡಾ. ವಿರೇಂದ್ರ ಹೆಗ್ಗಡೆಯುವರನ್ನು, ಗಣ್ಯಮಾನ್ಯರನ್ನು ಹರಗುರು ಚರಮೂರ್ತಿಗಳನ್ನು ಸಭೆಯಲ್ಲಿ ಭಾಗವಹಿಸಿದ್ದವರೆಲ್ಲರನ್ನು ಹೃದಯಾರೆ ಸ್ವಾಗತಿಸಿದರು.

೧೦೭ ದೀಪಗಳನ್ನು ವಿಧ್ಯುಕ್ತವಾಗಿ ಬೆಳಗಿಸುವ ಮೂಲಕ ಉದ್ಘಾಟನೆಯನ್ನು ನೆರವೇರಿಸಿದ ಧರ್ಮಸ್ಥಳದ ಧರ್ಮಾಧಿಕಾರಿ ಗಳಾದ ಡಾ. ವಿರೇಂದ್ರ ಹೆಗ್ಗಡೆಯವರು ಉದ್ಘಾಟನಾ ಭಾಷಣ ದಲ್ಲಿ ಧರ್ಮಸ್ಥಳದಲ್ಲಿ ನಡೆಯುತ್ತಿರುವ ಕಾರ್ಯಗಳಿಗೆ ಪ್ರೇರಕ ಶಕ್ತಿ ಪೂಜ್ಯರೇ ಎನುತ್ತ, ತಮ್ಮ ಅನುಭವವಾಣಿಯನ್ನು ಹೇಳಿದ್ದು ಹೀಗೆ. ೧೯೬೯ರಲ್ಲಿ ಕಾಲೇಜು ಕಟ್ಟಡದ ಶಂಕುಸ್ಥಾಪನೆಯನ್ನು ನಮ್ಮ ಕೋರಿಕೆಯ ಮೇರೆಗೆ ಪೂಜ್ಯರು ನೆರವೇರಿಸಿದರು. ಎರಡು ವರ್ಷದಲ್ಲಿ ಮುಗಿಯ ಬೇಕಾದ ಕಟ್ಟಡ ಕೇವಲ ಒಂದು ವರ್ಷದಲ್ಲಿ ಮುಗಿಯಿತು. ಇದು ಸೋಜಿಗವಾಯಿತು. ಪುನಃ ನಮ್ಮ ಅಪೇಕ್ಷೆಯಂತೆ ಪೂಜ್ಯರು ಉದ್ಘಾಟನೆಯನ್ನು ಮಾಡಿದರು. ಅಂದಿನ ಕಾಲಕ್ಕೆ ಉದ್ಘಾಟನೆ ಮತ್ತು ಪ್ರಾರಂಭೋತ್ಸವ ಎರಡು ಪೂಜ್ಯರಿಂದ ನೆರೆವೇರಿದುದು ಯೋಗಾಯೋಗ. ಇದು ಮರೆಯಲಾಗದ ಸಂಗತಿ ಎಂದರು. ಮುಂದುವರಿದು ಉತ್ತಮ ಪ್ರಜೆಯ ನಿರ್ಮಾಣಕ್ಕೆ ಪೂಜ್ಯರ ಮಾರ್ಗದರ್ಶನ ಅಗತ್ಯ. ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಅನ್ನ ಮತ್ತು ಜ್ಞಾನ ದಾಸೋಹ ನೀಡುವ ಮೂಲಕ ಅವರನ್ನು ಸಂಸ್ಕಾರಿಗಳನ್ನಾಗಿ ಮಾಡಿ ಸಮಾಜಕ್ಕೆ ರಾಷ್ಟ್ರಕ್ಕೆ ನೀಡುತ್ತಿರುವುದು ಅದ್ಭುತ ಕೊಡುಗೆ. ಎಲ್ಲಾ ಮಕ್ಕಳಿಗೂ, ಪೂಜ್ಯರು ಸೇವೆಯಲ್ಲೇ ಭಗವಂತನನ್ನು ತೋರಿಸಿ ಬದುಕು ಕಲಿಸಿಕೊಟ್ಟರು. ಇಂತಹ ಪೂಜ್ಯರ ಗುರುವಂದನೆ ಉದ್ಘಾಟನೆ ನೆರವೇರಿಸಲು ತುಂಬಾ ಸಂತೋಷ ವಾಗುತ್ತಿದೆ ಎಂದರು.

ಪೂಜ್ಯರ ಭಾವಚಿತ್ರ ಅನಾವರಣ ಮಾಡಿದ ಕೇಂದ್ರ ಸರ್ಕಾರದ ರೈಲ್ವೇ ಮಂತ್ರಿಗಳಾದ ಶ್ರೀ ಸದಾನಂದ ಗೌಡರು ಇದೊಂದು ಸ್ಮರಣೀಯ ಕಾರ್ಯಕ್ರಮ. ಇದರಲ್ಲಿ ಭಾಗವಹಿಸಿ ಪುಣ್ಯ ಕಟ್ಟಿಕೊಳ್ಳಲು ಶ್ರೀ ಚೆನ್ನಿಗಪ್ಪನವರು ಅವಕಾಶ ಮಾಡಿ ಕೊಟ್ಟಿರುತ್ತಾರೆ. ಮುಂದುವರಿದು ಭಕ್ತಿ, ಜ್ಞಾನದಾಸೋಹ ಪ್ರಾರಂಭವಾದುದು ಪೂಜ್ಯರಿಂದ, ಜ್ಞಾನದ ಬೆಳಕು. ಪೂಜ್ಯರ



ವರದಿ




ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರಿಂದ ಭಕ್ತಿ ಸಮರ್ಪಣೆ.

ಮಾರ್ಗದರ್ಶನದಲ್ಲಿ ಸಿದ್ಧಗಂಗಾಮಠದಲ್ಲಿ ಪ್ರಾರಂಭವಾಗಿದೆ. ವ್ಯಕ್ತಿಯ ಆಂತರಿಕ ಬೆಳವಣಿಗೆಗೆ ಪೂಜ್ಯರು ಕಾರಣ. ನಮ್ಮ ರಾಜ್ಯದಲ್ಲಿ ಈ ಮಠಗಳು ಇಲ್ಲವಾಗಿದ್ದಲ್ಲಿ ಭಾಗಶಃ ೫೦ ಜನರು ವಿದ್ಯೆಯಿಂದ ವಂಚಿತರಾಗುತ್ತಿದ್ದರು. ಪೂಜ್ಯರ ಇಂದಿನ ದಿನಚರಿ ನೋಡಿದಾಗ ನಾವೆಲ್ಲ ನಾಚಿಕೆ ಪಡಬೇಕು. ಜಾತಿಯ ವಿರುದ್ಧ ಶಿಕ್ಷಣ ನೀಡಿ ತನ್ಮೂಲಕ ಉನ್ನತ ಸಮಾಜ ನಿರ್ಮಾಣ ಕಾರ್ಯದಲ್ಲಿ ಶ್ರೀಮಠದ ಸೇವೆ ಸದಾ ಸ್ಮರಣೀಯ ಎಂದು ಭಾವತುಂಬಿ ಸ್ಮರಿಸಿದರು.

ಶ್ರೀ ನರಸಿಂಹದಾಸರ ಗ್ರಂಥ ಬಿಡುಗಡೆ ಮಾಡಿದ ಕಾರ್ಯಕ್ರಮದ ರೂವಾರಿ ಸಿ. ಚೆನ್ನಿಗಪ್ಪನವರು ಮಾತನಾಡುತ್ತ ೧೦೭ ವರ್ಷದ ನಮ್ಮ ಸ್ವಾಮೀಜಿಯವರು ಪರಮಾತ್ಮನ ಸ್ವರೂಪರು. ಅಂತಹ ಪರಮಾತ್ಮನ ಸೇವೆ ಮಾಡುವ ಸಂಕಲ್ಪ ವನ್ನು ಗಣ್ಯರೆಲ್ಲರೂ ಕೂಡಿ ನಿರ್ಣಯಿಸಿ ಅದನ್ನು ಕಾರ್ಯ ರೂಪಕ್ಕೆ ತರುವ ಮೂಲಕ ನಮ್ಮ ಪಾಪ ಕಳೆದು ಕೊಂಡಿರುತ್ತೇವೆ. ಅವರು ತಮ್ಮ ಹೃದಯಾಳದ ಮಾತನ್ನಾಡಿದ್ದು ಹೀಗೆ, ನಮ್ಮ ಪರಮಾತ್ಮ ಅನ್ನ, ಆಸರೆ, ಅಕ್ಷರ ಕಲಿಸಿ, ಅರಿವನ್ನು ಮೂಡಿಸಿ ನಮ್ಮನ್ನು ಮನುಷ್ಯರನ್ನಾಗಿ ಮಾಡಿದರು. ಶ್ರೀಮಠದ ಉಪಕಾರ ಸ್ಮರಿಸುವ ಸಲುವಾಗಿ ಎಷ್ಟೇ ಲಕ್ಷ ಜನ ಬಂದರು ಅವರಿಗೆ ಪೂಜ್ಯರ ಹೆಸರಿನಲ್ಲಿ ಹಳೆಯ ವಿದ್ಯಾರ್ಥಿಗಳು ಪ್ರಸಾದ ದಾಸೋಹ ಮಾಡಿರುವುದು ಸಂತಸವಾಗಿದೆ. ಇದೇ ಸಂದರ್ಭದಲ್ಲಿ ಸುತ್ತೂರು, ಆದಿಚುಂಚನಗಿರಿ, ಧರ್ಮಸ್ಥಳದ ಪೂಜ್ಯರು ಮಾಡುತ್ತಿರುವ ಸೇವೆಯನ್ನು ಸ್ಮರಿಸಿದರು. ರಾತ್ರಿ ಹತ್ತು ಗಂಟೆ ಯವರೆಗೆ ಪ್ರಸಾದ ವ್ಯವಸ್ಥೆ ಇರುತ್ತದೆ. ಎಲ್ಲರೂ ಪ್ರಸಾದ ಸ್ವೀಕರಿಸಿ ಹೋಗಲು ಮನವಿ ಮಾಡಿದರು. ಇವರ ನಿರ್ಮಲ ಹೃದಯದ ಮಾತುಗಳು ಎಲ್ಲರನ್ನು ಮಂತ್ರಮುಗ್ಧರನ್ನಾಗಿಸಿತ್ತು. ಹೀಗೆ ಕೃತಕೃತ್ಯಭಾವದಿಂದ ಭಕ್ತಿಸಮರ್ಪಣೆ ಸಲ್ಲಿಸಿದರು.

ನುಡಿನಮನ ಸಲ್ಲಿಸಿದ ಶ್ರೀ ಜಗದೀಶ್ ಶೆಟ್ಟರು ಪೂಜ್ಯರ ವೈಯಕ್ತಿಕ ಬದುಕೇ ಆದರ್ಶವಾಗಿದ್ದು. ಈ ಇಳಿ ವಯಸ್ಸಿನಲ್ಲಿ ಸೇವೆಯ ಮೂಲಕ ಸಮಾಜಕ್ಕೆ ಅರ್ಪಿಸಿಕೊಂಡಿದ್ದಾರೆ. ೧೦ ಸಾವಿರ ಬಡ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿರುವ ಒಂದೇ ಒಂದು ಶ್ರೇಷ್ಠ ಸಂಸ್ಥೆ ಶ್ರೀ ಸಿದ್ಧಗಂಗಾಮಠ. ಇದರ ಜೊತೆಯಲ್ಲಿ ಸುತ್ತೂರು, ಆದಿಚುಂಚನಗಿರಿ ಧರ್ಮಸ್ಥಳ ಸಂಸ್ಥೆಗಳು ಸಲ್ಲಿಸುತ್ತಿರುವ ಸೇವೆ ಶ್ಲಾಘನೀಯ. ಅದರಲ್ಲೂ ಧರ್ಮಸ್ಥಳ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಶಿವನುಡಿ.

ಸಂಸ್ಥೆ ಗ್ರಾಮೀಣಾಭಿವೃದ್ಧಿಗೆ ಒತ್ತು ಕೊಟ್ಟಿರುವುದು ಮಹತ್ವದ್ದು. ಇಂತಹ ಧಾರ್ಮಿಕ ಕಾರ್ಯಗಳ ಮೂಲಕ ಜನಜಾಗೃತಿ ಯಾಗಿ ನೈತಿಕ ಮೌಲ್ಯಗಳು ಹೆಚ್ಚಾಗಲಿ ಎಂದು ಆಶಿಸಿದರು.

ವಿಧಾನಪರಿಷತ್ತಿನ ಸಭಾಪತಿಗಳಾದ ಶ್ರೀ ಡಿ.ಹೆಚ್. ಶಂಕರಮೂರ್ತಿಯವರು ತಮ್ಮ ಅಂತರಾಳದ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದು ಹೀಗೆ. ಭಾರತ ವಿಶ್ವದಲ್ಲಿ ಶ್ರೇಷ್ಠ ಸ್ಥಾನ ಪಡೆದಿದೆ. ಯೋಗಿಗಳು, ತ್ಯಾಗಿಗಳು, ತಪಸ್ವಿಗಳು ಆಧ್ಯಾತ್ಮಿಕ ಚಿಂತನೆಯನ್ನು ಕಲ್ಪಿಸಿಕೊಟ್ಟರು. ಸೇವೆ ಮತ್ತು ತ್ಯಾಗದ ಮತ್ತೊಂದು ಹೆಸರೇ ಶ್ರೀ ಶಿವಕುಮಾರಮಹಾಸ್ವಾಮಿಗಳು. ಪೂಜ್ಯರಿರುವ ಸಮಾರಂಭ ದಲ್ಲಿ ಭಾಗಿಯಾಗುತ್ತಿರುವುದು ನಮ್ಮಗಳ ಭಾಗ್ಯ. ಮೇಲುಕೀಳೆನ್ನದೆ ಎಲ್ಲ ವರ್ಗದವರಿಗೂ ವಿದ್ಯೆ ಕಲಿಯಲು ಅವಕಾಶವಿರುವುದು ಶ್ರೀಮಠದಲ್ಲಿ. ಅದರಲ್ಲೂ ಮಹಮದೀಯ ಬಡ ವಿದ್ಯಾರ್ಥಿಗಳು ಕಲಿಯುತ್ತಿರುವುದು ತುಂಬಾ ಸಂತೋಷದ ಸಂಗತಿ. ಗೀತೆಯ ಮಾತಿನಂತೆ ಪೂಜ್ಯರು ಸೇವೆ ಮಾಡಲು ಬಂದಿದ್ದಾರೆನ್ನುವುದು ಸೂಕ್ತ. ಜನರ, ದೇಶದ ಉದ್ಧಾರಕ್ಕಾಗಿ ಹುಟ್ಟಿದವರು ಪೂಜ್ಯರು. ಶ್ರೀಗಳವರಿಗೆ ಸೇವೆ ಹೊರತು ಬೇರೆ ಏನೂ ಬೇಕಿಲ್ಲ. ಬೆಳಗು ೩ ಗಂಟೆಗೆ ಎದ್ದ ಯಾರು ಸಾಧನೆ ಮಾಡುವರೋ ಅವರು ಮೇಲ್ಮಟ್ಟಕ್ಕೆ ಹೋಗುತ್ತಾರೆನ್ನುವುದಕ್ಕೆ ನಮಗೆ ಪೂಜ್ಯರೇ ಸಾಕ್ಷಿ ಎಂದು ಹೃದಯಾರೆ ಸ್ಮರಿಸಿದರು.

ಆದಿಚುಂಚನಗಿರಿ ಶಾಖಾಮಠದ ಶ್ರೀ ಸೌಮ್ಯನಾಥ ಸ್ವಾಮೀಜಿಯವರು ಮಾತನಾಡುತ್ತ ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರಿಗೆ ಭಕ್ತಿ ಸಮರ್ಪಣೆ ಸಲ್ಲಿಸುವ ಮೂಲಕ ಶ್ರೀ ಚೆನ್ನಿಗಪ್ಪನವರು ಮತ್ತು ಸಂಗಡಿಗರು ಪುಣ್ಯ ಪಡೆದುಕೊಂಡು, ನಮಗೂ ಪಡೆಯಲು ಅವಕಾಶ ಮಾಡಿ ಕೊಟ್ಟರು. ಇಂತಹ ಸಮಾರಂಭದಲ್ಲಿ ಭಾಗವಹಿಸುವ ಅವಕಾಶ ದೊರೆತಿರುವುದು ನಮ್ಮ ಸುದೈವ ಎಂದರು.

ಸುತ್ತೂರು ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ ಶ್ರೀಗಳ ಬಗ್ಗೆ ಒಂದು ಮಠ ಮತ್ತು ಮಠಾಧಿಪತಿ ಹೇಗಿರ ಬೇಕೆಂಬುದನ್ನು ಪೂಜ್ಯರು ತಮ್ಮ ಜೀವನದಲ್ಲಿ ಆಚರಿಸಿ ನಮಗೆಲ್ಲ ಆದರ್ಶರಾಗಿ ಅನುಕರಣೀಯರಾಗಿದ್ದಾರೆ. ೧೦೭ ವರ್ಷಗಳ ಬದುಕನ್ನು ಸಾರ್ವತ್ರಿಕ ಸೇವೆಗೆ ಮತ್ತು ದೇಶದ ಭವಿಷ್ಯವನ್ನು ರೂಪಿಸುವ ಮಕ್ಕಳ ಸೇವೆ ಮಾಡಿದ ವಂದನೀಯರಾಗಿದ್ದಾರೆ. ಶ್ರೀಮಠದಲ್ಲಿ ಕಲಿತವರೆಲ್ಲರೂ ಗೌರವಕ್ಕೆ ಪಾತ್ರರಾಗುವ ರೀತಿಯಲ್ಲಿ ಬದುಕುತ್ತಿದ್ದಾರೆ. ಪೂಜ್ಯರು ಜಗತ್ತಿನಲ್ಲಿ ಹಿರಿಯ ರಾಗಲೆಂದು ಆಶಿಸುತ್ತೇನೆ ಎಂದು ಮನಸಾರೆ ವ್ಯಕ್ತಪಡಿಸಿದರು.







ಆದಿಚುಂಚನಗಿರಿ ಶಾಖಾ ಮಠದ
ಶ್ರೀ ಶ್ರೀ ಸೌಮ್ಯನಾಥ ಮಹಾಸ್ವಾಮಿಗಳವರಿಂದ ನುಡಿ ನಮನ.



ಶ್ರೀ ಗೌರಿಶಂಕರ ಅವರಿಂದ ಸ್ವಾಗತ.




ಕೀರ್ತನ ಗಂಧರ್ವ ಕೃತಿ ಲೋಕಾರ್ಪಣೆ

ಅಧ್ಯಕ್ಷತೆ ವಹಿಸಿದ ಮಾತನಾಡಿದ ನೆಲಮಂಗಲ ವಿಧಾನಸಭಾ ಸದಸ್ಯರಾದ ಡಾ. ಕೆ. ಶ್ರೀನಿವಾಸಮೂರ್ತಿ ಯವರು, ಪರಮಪೂಜ್ಯರ ಗುರುವಂದನೆಯಲ್ಲಿ ಭಾಗವಹಿಸುವ ಅವಕಾಶ ಸಿ. ಚೆನ್ನಿಗಪ್ಪನವರಿಂದ ದೊರೆತಿದೆ. ಇದು ನನ್ನ ಜೀವನದ ಮಹತ್ವದ ಸಮಯ. ಎಲ್ಲಾ ಸಮುದಾಯದವರಿಗೆ ಶ್ರೀಮಠದಲ್ಲಿ ಅವಕಾಶಮಾಡಿ ಕೊಟ್ಟಿದ್ದಲ್ಲದೆ, ಸಂಸ್ಕೃತ ಕಲಿಯಲು ಅವಕಾಶ ಮಾಡಿಕೊಟ್ಟು ಜಗದ ಅಣ್ಣನ ಆದರ್ಶವನ್ನು ಅಪ್ಪಿಕೊಂಡಿದ್ದಾರೆ. ಶ್ರೀಮಠದ ಹಳೆಯ ವಿದ್ಯಾರ್ಥಿಯಾದ ಸಿ. ಚೆನ್ನಿಗಪ್ಪನವರು ಮತ್ತು ಸಂಗಡಿಗರು ಪೂಜ್ಯರ ಹೆಸರಿನಲ್ಲಿ ನಡೆಸುತ್ತಿರುವುದು ಅವರ ಭಕ್ತಿಯ ಪ್ರತೀಕ ಎಂದು ಭಾವತುಂಬಿ ನುಡಿದರು.

ಪೂಜ್ಯರು ತಮ್ಮ ಆಶೀರ್ವಚನದಲ್ಲಿ ಮುತ್ತಿನಂತಹ ೩ ಪದಗಳನ್ನು ನಮ್ಮ ಮುಂದಿಟ್ಟು ಸಭೆಯಲ್ಲಿದ್ದವರನ್ನು ಎಚ್ಚರಿಸಿದ್ದು ಹೀಗೆ. ವ್ಯಕ್ತಿ, ಸಮಾಜ, ರಾಷ್ಟ್ರ ಈ ಮೂರು ಮುಖ್ಯಘಟಕಗಳು ಎಂದು ನೆನಪಿಸಿ ಸಮಾಜ ಮತ್ತು ರಾಷ್ಟ್ರವನ್ನು ವ್ಯಕ್ತಿ ಎಂದೂ ಮರೆಯಬಾರದು. ಹತ್ತು ಹಲವು ಉಪಕಾರ ಪಡೆದು ಬದುಕುತ್ತಿರುವ ಮನುಷ್ಯ ಕೊನೆ ಉಸಿರಿರುವವರೆಗೆ ಸಮಾಜ ಮತ್ತು ರಾಷ್ಟ್ರದ ಸೇವೆಯನ್ನು ಸಲ್ಲಿಸುವುದು ಅಗತ್ಯ ಎಂದರು. ಯಾರು ಸಮಾಜದ, ರಾಷ್ಟ್ರದ ಅಭ್ಯುದಯಕ್ಕಾಗಿ ತಮ್ಮ ಜೀವನವನ್ನು ಮೀಸಲಿಡುವರೋ ಅವರು ಸದಾ ಸ್ಮರಣೀಯರು ಎಂದು ಅಪ್ಪಣೆ ಕೊಡಿಸಿದರು. ನಿರೂಪಣೆ ಮಾಡಿದ ಪ್ರೊ. ಹೆಚ್.ವಿ.ವೀರಭದ್ರಯ್ಯನವರು ವಂದನಾರ್ಪಣೆ ಸಲ್ಲಿಸಿದರು.

ಚೆನ್ನಿಗಪ್ಪನವರು ಎಲ್ಲ ಗಣ್ಯಮಾನ್ಯರುಗಳನ್ನು ಗೌರವಿಸಿದ ರೀತಿ ಅನುಕರಣೀಯವಾಗಿತ್ತು. ಇದೊಂದು ಸ್ಮರಣೀಯ ಕಾರ್ಯಕ್ರಮವಾಗಿ ಮುಕ್ತಾಯವಾಯಿತು. ಇತ್ತೀಚಿನ ದಿನಗಳಲ್ಲಿ ಪೂಜ್ಯರು ಕಾರ್ಯಕ್ರಮದಲ್ಲಿ ಭಾಗವಹಿಸುವುದು ವಿರಳ. ಆದರೆ ಚೆನ್ನಿಗಪ್ಪನವರ ಭಕ್ತಿಯ ಶಕ್ತಿ ಪೂಜ್ಯರನ್ನು ಕಾರ್ಯಕ್ರಮ ಮುಗಿಯುವವರೆಗೂ ಇರುವಂತೆ ಮಾಡಿತ್ತು. ಇದು ಚೆನ್ನಿಗಪ್ಪ ನವರು ಸಲ್ಲಿಸಿದ ಶ್ರದ್ಧಾಭಕ್ತಿಯ ಸೇವೆಯ ಫಲಕ್ಕೆ ಸಾಕ್ಷಿ ಎನ್ನುವಂತಿತ್ತು. ಇಂತಹ ಭಕ್ತಿನಮನ ಕಾರ್ಯಕ್ರಮದಲ್ಲಿ ಭಾಗವಹಿಸಿದವರು ಪುಣ್ಯವಂತರು ಎನ್ನುವ ಮಾತು ಭಾಗ ವಹಿಸಿದ ಬಹುತೇಕ ಜನರಿಂದ ಕೇಳಿ ಬಂತು.

ಸದುದ್ದೇಶದಿಂದ ಮಾಡುವ ಕಾರ್ಯಗಳನ್ನು ಶ್ರದ್ಧೆ, ಭಕ್ತಿ, ವಿಶ್ವಾಸದಿಂದ ಮಾಡಿದರೆ ಎಂತಹ ಗಹನಕಾರ್ಯಗಳೂ ಕೂಡ ಶಿವನ ಕೃಪೆಯಿಂದ, ಪೂಜ್ಯರ ಆಶೀರ್ವಾದದಿಂದ ಸುಲಭ ಸಾಧ್ಯವಾಗುತ್ತವೆ. ಹೀಗೆ ಶ್ರೀ ಚನ್ನಿಗಪ್ಪನವರು ಬಹುಕಾಲ ನೆನಪಿಡುವಂತಹ ಕಾರ್ಯಕ್ರಮವನ್ನು ಸಾದರಪಡಿಸಿ ಎಲ್ಲರ ಪ್ರೀತಿಗೆ ಪಾತ್ರರಾದರು. ❀

## ಶ್ರೀ ಸಿದ್ಧಗಂಗಾ ಮಠ, ತುಮಕೂರು

### ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 374. | ಶ್ರೀ ಎನ್.ಜಿ. ಚಂದ್ರಶೇಖರ್, ನೇರಲಗಿ | 2,111.00 |
| 375. | ಶ್ರೀ ಕೆ.ಎಸ್. ಲಿಂಗದೇವರು, ಬೆಂಗಳೂರು | 10,000.00 |
| 376. | ಶ್ರೀ ಎಸ್. ಸಣ್ಣೇಗೌಡ, ಬಸವನಹಳ್ಳಿ | 1,001.00 |
| 377. | ಶ್ರೀ ವೈ.ಎನ್. ಲೋಕೇಶ್, ಚಿಕ್ಕಮಗಳೂರು | 1,070.00 |
| 378. | ಶ್ರೀ ಎಂ.ಎಸ್. ಪರಮಶಿವಪ್ಪ, ಅಂಕಿಹಳ್ಳಿ | 10,000.00 |
| 379. | ಶ್ರೀ ಎ.ಎಲ್. ಲಿಂಗಯ್ಯ, ಬೆಂಗಳೂರು | 10,111.00 |
| 380. | ಶ್ರೀ ಬಸವಪ್ರಭುಹಲಗುಲಕಿ, ಬಿಜಾಪುರ | 2,000.00 |
| 381. | ಶ್ರೀ ಕೆ.ವಿರೂಪಾಕ್ಷಯ್ಯ, ಬಸವೇಶ್ವರಬಡಾವಣೆ | 1,000.00 |
| 382. | ಶ್ರೀ ಜಿ.ಎಸ್. ಕಾರ್ತಿಕ್, ಬಿಕ್ಕೋಡು | 500.00 |
| 383. | ಶ್ರೀ ಹೆಚ್.ಆರ್. ಕೃಪೇಶ್, ಹಾಸನ | 500.00 |
| 384. | ಶ್ರೀ ಕೆ. ಶಾಂತರಾಜು, ಕೆರೇಹಳ್ಳಿ | 1,111.00 |
| 385. | ಶ್ರೀ ಎಸ್.ಬಿ. ಅಂಗಡಿ, ಬೆಂಗಳೂರು | 2,001.00 |
| 386. | ಶ್ರೀ ಜಿ. ಗುರುಬಸಪ್ಪ, ಬೆಂಗಳೂರು | 50,001.00 |
| 387. | ಶ್ರೀ ಎಸ್.ಐ.ಟಿ. ಅಲ್ಯುಮಿನಿ ಅಸೋಸಿಯೇಷನ್ ಎಸ್.ಐ.ಟಿ. ತುಮಕೂರು. | 5,00,000.00 |
| 388. | ಶ್ರೀ ಕೆ.ಎನ್. ದೇವರಾಜು, ಬೆಂಗಳೂರು | 1,001.00 |
| 389. | ಶ್ರೀ ಎನ್. ಶಿವಮ್ಮ, W/o ಶಿವಮ್ಮ ಬೆಂಗಳೂರು | 25,000.00 |
| 390. | ಶ್ರೀ ಎಸ್.ಎಂ. ಮಲ್ಲೇಶಪ್ಪ, ಹಾಸನ | 1,000.00 |
| 391. | ಶ್ರೀ ಎಂ. ಶಿವಕುಮಾರ್, ಮಂಡ್ಯ | 1,000.00 |
| 392. | ಶ್ರೀ ಕುಮಾರ್ ಮುದ್ದವನವರ್ ಮತ್ತು ಕುಟುಂಬ ಬೆಂಗಳೂರು | 1,501.00 |
| 394. | ಶ್ರೀ ಎಲ್. ಬಸವರಾಜು, ಶ್ರೀ ಸಿದ್ಧಗಂಗಾಮಠ | 1,000.00 |
| 395. | ಶ್ರೀ ಎಸ್.ವಿ. ಕೆಂಪಣ್ಣ, ಬೆಂಗಳೂರು | 1,000.00 |
| 396. | ಶ್ರೀ ಸಿದ್ಧಲಿಂಗಯ್ಯ, ಕೆಂಬಳಲು | 1,000.00 |
| 397. | ಶ್ರೀಮತಿ ಸತ್ಯಪ್ರೇಮಕುಮಾರಿ, ತುಮಕೂರು | 1,001.00 |
| 398. | ಶ್ರೀ ಕೆ.ಪಿ. ಶಿವಣ್ಣ, ತುಮಕೂರು | 1,000.00 |
| 399. | ಶ್ರೀ ಕಗ್ಗೇರಪ್ಪ, ದೊಡ್ಡಬಳ್ಳಾಪುರ | 2,000.00 |
| 400. | ಶ್ರೀ ಚಂದ್ರಯ್ಯ, ಚಿಕ್ಕಮಗಳೂರು | 10,000.00 |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 401. | ಶ್ರೀ ಅಡವೀಶಯ್ಯ, ಅಗಲಗುಂಟೆ | 10,001.00 |
| 402. | ಶ್ರೀ ಕೆ.ಬಿ. ವಸಂತರಾಜು, ಕೆಸಗೋಡು | 1,111.00 |
| 403. | ಶ್ರೀ ಜಿ.ಕೆ. ಪುಟ್ಟಲಿಂಗಯ್ಯ, ಮಧುಗಿರಿ | 2,000.00 |
| 404. | ಶ್ರೀ ಬಸವಲಿಂಗೇಗೌಡ, ಹಾಸನ | 501.00 |
| 405. | ಶ್ರೀ ಕೃಪಾಶಂಕರ್, ಬೆಂಗಳೂರು | 750.00 |
| 406. | ಶ್ರೀ ಹೆಚ್.ವಿ. ಸಾವಂದಯ್ಯ, ಬೆಂಗಳೂರು | 1001.00 |
| 407. | ಶ್ರೀ ಬಿ.ಎನ್. ಶಿವನಂಜಪ್ಪ, ಬೆಳಮೆ | 500.00 |
| 408. | ಶ್ರೀ ಬಿ. ಶಿವರುದ್ರಪ್ಪ, ಹಾಸನ | 1000.00 |
| 409. | ಶ್ರೀ ಜೆ.ಎಲ್. ಮಂಜುನಾಥ, ಬೆಂಗಳೂರು | 1001.00 |
| 410. | ಶ್ರೀ ಹೆಚ್.ಸಿ. ನಾಗೇಶ, ಹೊಸಕೆರೆ | 1234.00 |
| 411. | ಶ್ರೀ ಸುಹನಿ ಆರ್. ಪಟೇಲ್, ಕಲನಹುಂಡಿ | 5000.00 |
| 412. | ಶ್ರೀ ಎಸ್. ಪುಟ್ಟನರಸಯ್ಯ, ತುಮಕೂರು | 1,00,000.00 |
| 413. | ಶ್ರೀ ಕೆ.ಎಲ್. ಚಂದ್ರಯ್ಯ, ಬೆಂಗಳೂರು | 5000.00 |
| 414. | ಶ್ರೀ ಎಸ್. ಪುಟ್ಟನರಸಯ್ಯ, ಸೋಮಶೆಟ್ಟಿಹಳ್ಳಿ | 10,000.00 |
| 415. | ಶ್ರೀ ಬಿ.ವಿ. ಶಿವಮೂರ್ತಿ, ಬೆಟ್ಟಸೋಗೆ | 500.00 |
| 416. | ಶ್ರೀ ಕೃಪಾಶಂಕರ್, ಬೆಂಗಳೂರು | 500.00 |
| 417. | ಶ್ರೀ ಕೆ.ಎಲ್. ಸಿದ್ಧಲಿಂಗಯ್ಯ, ಬೆಂಗಳೂರು | 10,001.00 |
| 418. | ಶ್ರೀ ಬಿ.ಎ. ವಿಶ್ವನಾಥ ಮತ್ತು ಶ್ರೀಮತಿ ಗಂಬಾಂಬಿಕಾ, ಬೆಂಗಳೂರು | 12,001.00 |
| 419. | ಶ್ರೀ ಹರಿಶ್ಚಂದ್ರ ಕೋಲಿ, ಮಹಾರಾಷ್ಟ್ರ | 501.00 |
| 420. | ಶ್ರೀ ಸಿ. ಸಿದ್ಧಲಿಂಗಪ್ಪ, ಲಕ್ಷ್ಮಿಪುರ | 5001.00 |
| 421. | ಶ್ರೀ ಗುರುಸಿದ್ಧಪ್ಪ, ಬೆಂಗಳೂರು | 1000.00 |
| 422. | ಶ್ರೀ ಎಸ್. ಸೋಮಶೇಖರ್, ಬೆಂಗಳೂರು | 2000.00 |
| 423. | ಶ್ರೀ ಎ.ಬಿ. ರಾಜಪ್ಪ, ಆಲೂರು | 1001.00 |
| 424. | ಶ್ರೀ ಎನ್. ಶಿವಣ್ಣ, ಬಿಳಿಜಾಜಿ | 500.00 |
| 425. | ಶ್ರೀ ಓ.ಎಸ್. ಮಲ್ಲೇಶಯ್ಯ, ಬೆಂಗಳೂರು | 5001.00 |
| 426. | ಶ್ರೀ ಟಿ.ಸಿ. ಮರಿಗೌಡ, ಬೆಂಗಳೂರು | 1001.00 |
| 427. | ಶ್ರೀ ಹೇಮಣ್ಣ ದುಂಡಬಿ, ಬೆಂಗಳೂರು | 1010.00 |
| 428. | ಶ್ರೀ ಟಿ.ಕೆ. ಶಿವಲಿಂಗಪ್ಪ, ದಾವಣಗೆರೆ | 1001.00 |
| 429. | ಶ್ರೀ ಟಿ. ಶೇಖರಪ್ಪ, ಕೊಟ್ಟೂರು | 1000.00 |

